# ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ: ಒಂದು ಅಧ್ಯಯನ

## (ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟ ಹಿಡಕಲ್ಲ ಅನುಲಕ್ಷಿಸಿ)

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್.ಪದವಿಗಾಗಿ ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಾದರ ಪಡಿಸಿರುವ ಸಂಶೋಧನ ಪ್ರಬಂಧ

(ನೊಂದಣಿ ಸಂಖ್ಯೆ: BRDSHDS-00649)


● ಸಂಶೋಧಕರು ●

ಶ್ರೀ ರಮೇಶಕುಮಾರ ಬಸಗೌಡ ಘಂಟಿ

● ಮಾರ್ಗದರ್ಶಕರು ●

ಡಾ.ಸಿ.ಆರ್.ಗುಡ... ಎಂ.ಎ., ಪಿ.ಎಚ್.ಡಿ.

ಮುಖ್ಯಸ್ಥರು

...ಗ

ಶ್ರೀ ಬಿ... ...ಂದ್ರ

ತಾ: ರಾಯಬಾ... ...ಾವಿ





ಸಂಶೋಧನಾ ಕೇಂದ್ರ

ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ.

ತಾ: ರಾಯಬಾಗ ಜಿ: ಬೆಳಗಾವಿ








ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ

ವಿದ್ಯಾರಣ್ಯ, ಹಂಪಿ-೫೮೩೨೭೬

೨೦೧೩

# ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ: ಒಂದು ಅಧ್ಯಯನ

(ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟ ಹಿಡಕಲ್ಲ ಅನುಲಕ್ಷಿಸಿ)

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್.ಪದವಿಗಾಗಿ ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಾದರ ಪಡಿಸಿರುವ ಸಂಶೋಧನ ಪ್ರಬಂಧ

(ನೊಂದಣಿ ಸಂಖ್ಯೆ: BRDSHDS-00649)

ಸಂಶೋಧಕರು

**ಶ್ರೀ ರಮೇಶಕುಮಾರ ಬಸಗೌಡ ಘಂಟಿ**

ಮಾರ್ಗದರ್ಶಕರು

**ಡಾ.ಸಿ.ಆರ್.ಗುಡಸಿ**

ಮುಖ್ಯಸ್ಥರು

ಅಭಿವೃದ್ಧಿ ಅಧ್ಯಯನ ವಿಭಾಗ

ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ-೫೯೧೨೨೦

ತಾ: ರಾಯಬಾಗ ಜಿ: ಬೆಳಗಾವಿ

ಸಂಶೋಧನಾ ಕೇಂದ್ರ

ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ.

ತಾ: ರಾಯಬಾಗ ಜಿ: ಬೆಳಗಾವಿ




ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ

ವಿದ್ಯಾರಣ್ಯ, ಹಂಪಿ-೫೮೩೨೭೬

೨೦೧೩

# ಪ್ರಮಾಣ ಪತ್ರ

**ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ಡಾ. ಸಿ.ಆರ್.ಗುಡಸಿ** ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ **ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ** *ಅಭಿವೃದ್ಧಿ ಅಧ್ಯಯನ* ವಿಷಯದಲ್ಲಿ *ಎಂ.ಫಿಲ್.ಪದವಿಗಾಗಿ* ಸಲ್ಲಿಸಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದು ಹಾಗೂ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

RBhanti

ಸ್ಥಳ : ಹಾರೂಗೇರಿ
ದಿನಾಂಕ : ೨೯/೦೭/೨೦೧೩

**ರಮೇಶಕುಮಾರ ಬ.ಘಂಟಿ**
ಸಂಶೋಧನಾ ವಿದ್ಯಾರ್ಥಿ
ಶ್ರೀ ಬಿ.ಆರ್.ದರೂರ ಸಂಶೋಧನಾ
ಕೇಂದ್ರ, ಹಾರೂಗೇರಿ.

# ದೃಡಿಕರಣ ಪತ್ರ

ಶ್ರೀ ರಮೇಶಕುಮಾರ ಬಸಗೌಡ ಘಂಟಿ ಇವರು **ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ** ಮೂಲಕ **ಹಂಪಿ ಕನ್ನಡ ವಿಶ್ವವಿದ್ಯಾಲಯದ** ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ *ಎಂ.ಫಿಲ್.* ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಡಿಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೯/೦೭/೨೦೧೩

ಮಾರ್ಗದರ್ಶಕರು
**ಡಾ.ಸಿ.ಆರ್.ಗುಡಸಿ.ಎಂ.ಕಾಂ.ಪಿ.ಎಚ್.ಡಿ.**
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ.

## ಕೃತಜ್ಞತೆಗಳು

**"ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ : ಒಂದು ಅಧ್ಯಯನ"** ಈ ವಿಷಯದ ಕುರಿತು ಸಂಶೋಧನೆ ಮಾಡಲು ಹಾಗೂ ಅಡಿ-ಅಡಿಗೂ ಮುಕ್ತ ಮನಸ್ಸಿನಿಂದ ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿರುವ **ಡಾ. ಸಿ.ಆರ್.ಗುಡಸಿ** ಮುಖ್ಯಸ್ಥರು **ಅಭಿವೃದ್ಧಿ ಅಧ್ಯಯನ ವಿಭಾಗ, ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ ಹಾರೂಗೇರಿ** ಇವರಿಗೆ ನನ್ನ ಅನಂತ ಕೃತಜ್ಞತೆಗಳು.

ನಮ್ಮನ್ನೆಲ್ಲ ಹುರಿದುಂಬಿಸಿ ಸಕಾಲದಲ್ಲಿ ಸಂಶೋಧನೆ ಪೂರ್ಣಗೊಳ್ಳಲು ಮಾರ್ಗದರ್ಶನ ನೀಡಿದ **ಡಾ. ವಿ.ಎಸ್.ಮಾಳಿ** *ನಿರ್ದೇಶಕರು ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ ಹಾರೂಗೇರಿ* ಇವರಿಗೆ ನನ್ನ ಅನಂತ ಕೃತಜ್ಞತೆಗಳು.

ಸಂಶೋಧನೆಗಾಗಿ ಆಯ್ಕೆ ಮಾಡಿಕೊಂಡ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟದ ಶಾಲೆಯ ಮುಖ್ಯೋಪಾಧ್ಯಾಯರಾದ **ಶ್ರೀ ಎಲ್.ಬಿ.ಕಂಬಾರ**, ಸಹ ಶಿಕ್ಷಕರಾದ **ಶ್ರೀ ಎಸ್.ಎಸ್.ಮಹೇಶ, ಶ್ರೀ ವಾಯ್.ಎಸ್.ವಗ್ಗಿ, ಶ್ರೀ ಎಸ್.ಎ.ಮೊಖಾಸಿ, ಶ್ರೀಮತಿ: ಎ.ಆರ್.ಕುರಣೆ** ಇವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

ಇದೆ ಶಾಲೆಯ ಸಹ ಶಿಕ್ಷಕರಾದ **ಶ್ರೀ ಎಸ್.ಎ.ಹಣಸಿ** ಯವರು ನನ್ನ ಪ್ರಶ್ನಾವಳಿಗಳ ರುಪುರೇಷೆಗಳ ರುವಾರಿ. ಸಂಶೋಧನೆಯಲ್ಲಿ ಎಸ್.ಡಿ.ಎಮ್.ಸಿ.ಯ ಕುರಿತು ಸಾಹಿತ್ಯವನ್ನು ಒದಗಿಸಿ, ಸಹನೆಯಿಂದ ಮಾಹಿತಿಯನ್ನು ನೀಡಿ, ಕೈಹಿಡಿದು ಮುನ್ನಡೆಸಿ ಸಂಶೋಧನೆ ಪೂರ್ಣಗೊಳ್ಳಲು ಕಾರಣರಾದ **ಶ್ರೀ ಎಸ್.ಬಿ.ಕ್ಯಾಸ್ತಿ** ಯವರಿಗೆ ನನ್ನ ನಮನಗಳು.

ಶಾಲೆಯ ಎಸ್.ಡಿ.ಎಮ್.ಸಿ.ಯ ಸದಸ್ಯರು, ವಿದ್ಯಾರ್ಥಿ/ನಿಯರು, ಪಾಲಕರು ನನ್ನ ಸಂಶೋಧನೆಗೆ ಮುಕ್ತವಾಗಿ ಸಹಕರಿಸಿ, ಸಂಶೋಧನೆ ಪೂರ್ಣಗೊಳ್ಳಲು ಸಹಾಯ-ಸಹಕಾರ ನೀಡಿದ್ದಕ್ಕಾಗಿ ಅವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

ನನ್ನ ಈ ಸಂಶೋಧನೆಗೆ ಸಹಕಾರ ನೀಡಿದ **ಶ್ರೀ ಎಂ.ಪಿ.ಕಂಟಿಕಾರ** ಕಾರ್ಯದರ್ಶಿಗಳು ಶ್ರೀ ಸತ್ಯಪ್ರಭು ಶಿಕ್ಷಣ ಸಂಸ್ಥೆ ಹಿಡಕಲ್ಲ, **ಶ್ರೀ ಬಿ.ಎಸ್.ಹಾಡಕಾರ** ಕಾರ್ಯದರ್ಶಿಗಳು ಶ್ರೀ ಶಾರದಾ ಶಿಕ್ಷಣ ಸಂಸ್ಥೆ ಹಾರೂಗೇರಿ, ಇವರಿಗೂ ನನ್ನ ಕೃತಜ್ಞತೆಗಳು.

ನನ್ನ ಉನ್ನತ ವ್ಯಾಸಂಗಕ್ಕೆ ಹಾಗೂ ಸಂಶೋಧನೆಯ ಚಟುವಟಿಕೆಗೆ ತುಂಬು ಹೃದಯದಿಂದ ಹರಸಿ ಪ್ರೋತ್ಸಾಹ ನೀಡಿ ಆಶೀರ್ವದಿಸಿದ ನನ್ನ ಪೂಜ್ಯ ತಂದೆಯವರಾದ **ಶ್ರಿ ಬಸಗೌಡ ಲ.ಘಂಟಿ** ಹಾಗೂ ಪೂಜ್ಯ ತಾಯಿಯವರಾದ **ಶ್ರೀಮತಿ: ತಾರಾಮತಿ ಬ.ಘಂಟಿ** ಯವರಿಗೆ ನನ್ನ ಅನಂತ ಅನಂತ ಕೃತಜ್ಞತೆಗಳು.

ನನ್ನ ಸಂಶೋಧನಾ ಚಟುವಟಿಕೆಗಳಿಗೆ ಸಹಕಾರ ನೀಡಿ ಉನ್ನತ ವ್ಯಾಸಂಗಕ್ಕೆ ಪ್ರೇರೇಪಿಸಿದ ನನ್ನ ಅಣ್ಣನಾದ **ಶ್ರೀ ಸುರೇಶ ಬ.ಘಂಟಿ** ಹಾಗೂ ಅವರ ಧರ್ಮಪತ್ನಿಯಾದ **ಶ್ರೀಮತಿ: ರೂಪಾ ಸು.ಘಂಟಿ** ಹಾಗೂ ಅವರಿಬ್ಬರ ಮಕ್ಕಳಾದ **ವಿಜಯ** ಮತ್ತು **ವೇದಾ** ಇವರಿಗೂ ನನ್ನ ಕೃತಜ್ಞತೆಗಳು.

ಸಂಶೋಧಿಸಿದ ಕ್ಷೇತ್ರಾಧ್ಯಯನದ ಮಾಹಿತಿಯ ಕ್ರೂಢಿಕರಣದಲ್ಲಿ ಹಾಗೂ ಸಂಶೋಧನೆಯ ಸಂದರ್ಭದಲ್ಲಿ ಸಹಾಯ ಮಾಡಿ, ಅಂದವಾಗಿ ಬೆರಳಚ್ಚು ಮಾಡಿಕೊಟ್ಟು ಸಹಕರಿಸಿದ ನನ್ನ ಸಂಬಂಧಿಯಾದ **ಶ್ರಿ ಬಾಳಪ್ಪ ಯ.ಜಗದಾಳ** ಇವರ ಸೇವೆ ಹಾಗೂ ಸಹಕಾರಕ್ಕೆ ನಾನು ಋಣಿಯಾಗಿದ್ದೇನೆ.

ಅಧ್ಯಯನ ಯಶಸ್ವಿಯಾಗಲು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಸ್ಥಳ : ಹಾರೂಗೇರಿ. ಸಂಶೋಧನಾ ವಿದ್ಯಾರ್ಥಿ
ದಿನಾಂಕ : 29/07/2013 ರಮೇಶಕುಮಾರ ಬಸಗೌಡ ಘಂಟಿ.

# ಪರಿವಿಡಿ


| ಅಧ್ಯಯನಗಳು | ಪು.ಸಂ |
|---|---|
| ಅಧ್ಯಾಯ ಒಂದು : ಪೀಠಿಕೆ, ಅಧ್ಯಯನದ ಪ್ರವೇಶ, ಮಹತ್ವ, ಮಿತಿ, ಉದ್ದೇಶ, ವಿಧಾನ ಹಾಗೂ ವಿನ್ಯಾಸ | ೦೧-೧೩ |
| ಅಧ್ಯಾಯ ಎರಡು : ಶಾಲಾ ಸುಧಾರಣೆಯ ಪರಿಕಲ್ಪನೆ ಮತ್ತು ಯೋಜನೆಗಳ ಸಾಹಿತ್ಯ ಅವಲೋಕನ | ೧೪-೪೨ |
| ಅಧ್ಯಾಯ ಮೂರು : ಎಸ್.ಡಿ.ಎಮ್.ಸಿ. ಕಾರ್ಯಚಟುವಟಿಕೆಗಳ ವಿಶ್ಲೇಷಣೆ ಮತ್ತು ಸಹಭಾಗಿತ್ವ ಹೊಂದಿದವರ ಅಭಿಪ್ರಾಯಗಳು | ೪೩-೬೪ |
| ಅಧ್ಯಾಯ ನಾಲ್ಕು : ಎಸ್.ಡಿ.ಎಮ್.ಸಿ.ಯ ಸಾಫಲ್ಯ-ವೈಫಲ್ಯಗಳು | ೬೫-೭೨ |
| ಅಧ್ಯಾಯ ಐದು : ಸಮಾರೋಪ, ಫಲಿತಗಳು ಮತ್ತು ಸಲಹೆಗಳು | ೭೩-೮೦ |
| ಅನುಬಂಧ : ಪ್ರಶ್ನಾವಳಿಗಳು | ೮೧-೮೪ |
| ಗ್ರಂಥ ಋಣ | ೮೫ |

# ಅಧ್ಯಾಯ-೧

## ಅಧ್ಯಯನದ ಪ್ರವೇಶ, ಮಹತ್ವ, ಮಿತಿ, ಉದ್ದೇಶ, ವಿಧಾನ ಮತ್ತು ವಿನ್ಯಾಸ

೧. ಪೀಠಿಕೆ
೨. ಅಧ್ಯಯನದ ಪ್ರವೇಶ
೩. ಅಧ್ಯಯನದ ಮಹತ್ವ
೪. ಅಧ್ಯಯನದ ಮಿತಿ
೫. ಅಧ್ಯಯನದ ಉದ್ದೇಶ
೬. ಅಧ್ಯಯನದ ವಿಧಾನ
೭. ಅಧ್ಯಯನದ ವಿನ್ಯಾಸ

*೧.ಪೀಠಿಕೆ*

ಅನಕ್ಷರತೆ, ಬಡತನ, ನಿರುದ್ಯೋಗ, ಜನಸಂಖ್ಯಾ ಸ್ಫೋಟ ಹಿಂದುಳಿದ ರಾಷ್ಟ್ರಗಳ ಪ್ರಮುಖ ಸಮಸ್ಯೆಗಳಾಗಿವೆ. ಭಾರತ ೧,೫೦,೦೦೦ ಕ್ಕಿಂತ ಹೆಚ್ಚು ಗ್ರಾಮಗಳನ್ನು ಒಳಗೊಂಡ ರಾಷ್ಟ್ರವಾಗಿದೆ. ದೇಶವು ಬಡತನ, ನಿರುದ್ಯೋಗ, ಅನಕ್ಷರತೆ, ಸಾಮಾಜಿಕ ಅಸಮಾನತೆ, ಕೃಷಿಯ ಮೇಲೆ ಅತಿಯಾದ ಅವಲಂಬನೆ, ಲಿಂಗ ತಾರತಮ್ಯ, ಮೌಢ್ಯಗಳ ಆರಾಧನೆ, ಮೂಢನಂಬಿಕೆಗಳನ್ನು ಪೋಷಿಸುವ ಸಂಪ್ರದಾಯಗಳು, ಜಾತಿ ವ್ಯವಸ್ಥೆ, ಭ್ರಷ್ಟಾಚಾರ, ಕಂದಾಚಾರ, ಹಳಿತಪ್ಪುತ್ತಿರುವ ರಾಜಕಾರಣ, ನೌಕರಶಾಹಿಯ ದರ್ಬಾರು, ಜನಸಾಮಾನ್ಯರ ಶೋಷಣೆ, ಸಮಾಜಕ್ಕೆ ಕಂಟಕವಾಗಿರುವ ಮಧ್ಯಪಾನ, ವರದಕ್ಷಣೆ, ಮಾದಕ ಪದಾರ್ಥಗಳು, ಜೀತ ಪದ್ದತಿ ಇತ್ಯಾದಿ ವಿಷಯಗಳಿಂದ ದೇಶ ಆಂತರಿಕವಾಗಿ ಆತಂಕಿತವಾಗಿರುವುದು ಸುಳ್ಳಲ್ಲ.

ಅಕ್ಷರ ಕ್ರಾಂತಿಯಿಂದ ಮಾತ್ರ ಜನರ ಅಭಿವೃದಿ ಸಾದ್ಯ. ಜನರು ಅಭಿವೃದ್ದಿ ಹೊಂದಿದರೆ ದೇಶವು ಅಭಿವೃದ್ದಿ ಹೊಂದುತ್ತದೆ. ಹೀಗಾಗಿ ದೇಶದ ಶೈಕ್ಷಣಿಕ ವ್ಯವಸ್ಥೆಯಲ್ಲಿ ಆಮೂಲಾಗ್ರಹ ಬದಲಾವಣೆಗಳಾಗಿ ಪ್ರತಿಯೊಬ್ಬರಿಗೂ ಶಿಕ್ಷಣ ದೊರೆತರೆ ದೇಶದ ಉನ್ನತಿ ಸಾಧ್ಯ.

ಮುಂದುವರೆದ ರಾಷ್ಟ್ರಗಳನ್ನು ಗಮನಿಸಿದಾಗ ಕಂಡುಬರುವ ಗಮನಾರ್ಹ ಅಂಶವೆಂದರೆ, ಆ ದೇಶದ ಶಿಕ್ಷಣ ವ್ಯವಸ್ಥೆ ಹಾಗೂ ಸುಶಿಕ್ಷಿತ ಜನ ಸಂಖ್ಯೆ. ಅಂದರೆ, ಮುಂದುವರೆದ ರಾಷ್ಟ್ರಗಳು ***ಶಿಕ್ಷಣಕ್ಕೆ*** ಪ್ರಥಮ ಪ್ರಾಶಸ್ತ್ಯ ನೀಡಿವೆ ಎಂಬುದು ಸ್ಪಷ್ಟವಾಗುತ್ತದೆ.

ದೇಶದ ಪ್ರಗತಿಗೆ ಶಿಕ್ಷಣವೇ ಮೂಲಮಂತ್ರವಾಗಬೇಕು.ಅಂದಾಗ ಮಾತ್ರ ನಮ್ಮ ದೇಶ ಅಭಿವೃದ್ದಿ ಹೊಂದಿದ ದೇಶಗಳ ಸಾಲಿನಲ್ಲಿ ನಿಲ್ಲಬಹುದು. ಈ ದಿಶೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿಯೂ ನಮ್ಮ ದೇಶದಲ್ಲಿ ಶಿಕ್ಷಣ ವ್ಯವಸ್ಥೆ ಇತ್ತು. ಸ್ವಾತಂತ್ರ್ಯ ನಂತರವೂ ಸರಕಾರಗಳು ದೇಶದಲ್ಲಿ ಶೈಕ್ಷಣಿಕ ಪ್ರಗತಿಗಾಗಿ ಅನೇಕ ಯೋಜನೆಗಳನ್ನು,ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿವೆ.ಆದರೆ ಅಂದುಕೊಂಡಷ್ಟು ಪ್ರಗತಿ ಸಾಧಿಸಲು ಆಗದಿರುವುದು ವಿಷಾದನೀಯ. ಇನ್ನಾದರೂ ಸರಕಾರಗಳು ಶಿಕ್ಷಣವನ್ನು ನೂರಕ್ಕೆ ನೂರರಷ್ಟು ಅನುಷ್ಠಾನಗೊಳಿಸಲು ಶೀಘ್ರವಾಗಿ ಪ್ರಯತ್ನಿಸಲೇಬೇಕು. ಏಕೆಂದರೆ ಶಿಕ್ಷಣವೂ ನಾಗರಿಕನ ಮೂಲಭೂತ ಹಕ್ಕು. ಅದನ್ನು ಒದಗಿಸುವುದು ಸರಕಾರದ ಆದ್ಯ ಕರ್ತವ್ಯ. ಶೈಕ್ಷಣಿಕ ಸುಧಾರಣೆಯಿಂದ ದೇಶದ ಅಭಿವೃದ್ಧಿ ಎಂಬುದರಲ್ಲಿ ಎರಡು ಮಾತಿಲ್ಲ.

## ೨.ಅಧ್ಯಯನದ ಪ್ರವೇಶ

### ೧.ಶಾಲೆಯ ಅರ್ಥ

ಶಾಲೆ ಎಂಬುದರ ಪದಶಃ ಅರ್ಥ ನೋಡಿದಾಗ ಕೆಳಗಿನ ಅಂಶಗಳನ್ನು ಕಾಣಬಹುದು.

- ಜ್ಞಾನ ಅಥವಾ ಮಾರ್ಗದರ್ಶನ ನೀಡುವ ಸಲುವಾಗಿರುವ ಸಂಸ್ಥೆ.
- ಜ್ಞಾನಾರ್ಜನೆಗಾಗಿ ಅಥವಾ ಪ್ರಚಾರಕ್ಕಾಗಿ ರೂಪಿಸಿದ ಕಟ್ಟಡ.
- ಉಪನ್ಯಾಸಕ್ಕಾಗಿ ನಿರ್ಮಿಸಿದ ಕಟ್ಟಡ ಅಥವಾ "ತತ್ವಶಾಸ್ತ್ರದ ಭಾಗ". (ಇದನ್ನು 'School' ಇಂಗ್ಲೀಷ್ ಪದದ ಗ್ರೀಕ್ ಮೂಲ 'Skhole' ಎಂಬುದರಿಂದ ಪಡೆದುಕೊಳ್ಳಲಾಗಿದೆ).

ಶಾಲೆ ಎಂದರೇನು? ಚಿಕ್ಕ ಮಕ್ಕಳಿಗೆ ಶಿಕ್ಷಣ ನೀಡುವ ಸಂಸ್ಥೆಯೇ ಶಾಲೆ. ಆದರೆ ಇದು ಸೀಮಿತವಾದ ಅರ್ಥ. ಇದರಂತೆಯೇ ಜಾತಿ, ಮತ, ವರ್ಣ- ಬೇಧಗಳಿಲ್ಲದೆ ಎಲ್ಲ ಮಕ್ಕಳೂ ಒಂದೇ ಚಾವಣಿಯಡಿಯಲ್ಲಿ ಕುಳಿತು, ಶಿಕ್ಷಕರಿಂದ ವಿವಿಧ ವಿಷಯಗಳನ್ನು ಕಲಿಯಲು ಅನುಕೂಲ ಮಾಡಿಕೊಡುವ ದೇವಾಲಯವಿದ್ದಂತೆ ಎಂಬ ಅಭಿಪ್ರಾಯವೂ ಇದೆ.

ಶಾಲೆ ಎಂಬ ಪದಕ್ಕೆ ಶಿಕ್ಷಣ ತಜ್ಞರು ತಮ್ಮದೇ ರೀತಿಯಲ್ಲಿ ವ್ಯಾಪಕವಾದ ವಾಖ್ಯೆ ನೀಡಿದ್ದಾರೆ. ರೈಬರ್ನ್ ಎಂಬುವರು **"ಶಾಲೆಯನ್ನು ಒಂದು ಸಹಕಾರಿ ಸಂಘ"** ಎಂದಿದ್ದಾರೆ. ವಿದ್ಯಾರ್ಥಿಗಳ ಹಿತಾಸಕ್ತಿ ಸಾಧಿಸಲು ಹಲವು ಸಂಸ್ಥೆ/ನಿಯೋಗಗಳ ಸಹಕಾರದಿಂದ ಶ್ರಮಿಸುವ ಸಂಘವೇ ಶಾಲೆ.

### ೨.ಶಿಕ್ಷಣದ ವರ್ಗೀಕರಣ

ಶಿಕ್ಷಣವನ್ನು ಸ್ಥೂಲವಾಗಿ ಪ್ರಾಥಮಿಕ (ಮೂಲ) ಮತ್ತು ಉನ್ನತವೆಂದು ವರ್ಗೀಕರಿಸುವುದು ರೂಢಿಯಲ್ಲಿದೆ. ವಾಸ್ತವವಾಗಿ ಇವೆರಡರ ನಡುವೆ ಪ್ರೌಢ ಶಿಕ್ಷಣ ಹಾಗೂ ಪದವಿಪೂರ್ವ ಶಿಕ್ಷಣವೆಂಬ ಮಧ್ಯಂತರ ಹಂತಗಳೂ ಇವೆ. ೧ ರಿಂದ ೧೦ ನೇಯ ತರಗತಿಗಳನ್ನು ಒಳಗೊಂಡ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಪ್ರಾಥಮಿಕವೆಂದು ಮತ್ತು ಅದರ ನಂತರದ್ದನ್ನು ಉನ್ನತವೆಂದೂ ವರ್ಗೀಕರಿಸಲಾಗಿದೆ. ಇತ್ತೀಚೆಗೆ ಪೂರ್ವ ಪ್ರಾಥಮಿಕವೆಂಬ ಹಂತವೂ ರೂಪು ಗೊಂಡಿದೆ.

### ೩.ಸಂವಿಧಾನದ ಗುರಿ

ಸಂವಿಧಾನವನ್ನು ನಾವು ಒಪ್ಪಿಕೊಂಡ ಜನವರಿ ೨೬,೧೯೫೦ ರ ನಂತರ ಹತ್ತು ವರ್ಷಗಳ ಅವಧಿಯಲ್ಲಿ ಶಿಕ್ಷಣವು ಎಲ್ಲರಿಗೂ ಒದಗುವಂತಾಗಬೇಕು ಎಂಬ ಗುರಿಯನ್ನು ನಿಗದಿಪಡಿಸಲಾಗಿತ್ತು. ಅದು ಇಂದಿಗೂ ಗುರಿಯಾಗಿಯೇ ಉಳಿದಿದೆ.

### ೪.ಶಿಕ್ಷಣದ ಸ್ಥಿತಿ-ಗತಿ

ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಬದಲಾವಣೆ ದೃಷ್ಟಿಯಿಂದ ಶಿಕ್ಷಣದ ಪಾತ್ರ ತುಂಬಾ ಮಹತ್ವದ್ದಾಗಿದೆ. ಅಭಿವೃದ್ಧಿ ಅರ್ಥಶಾಸ್ತ್ರದಲ್ಲಿ ಶಿಕ್ಷಣವನ್ನು 'ಮಾನವ ಬಂಡವಾಳ'ವೆಂದೇ ಪರಿಗಣಿಸಲಾಗಿದೆ. ಆದರೆ ಶಿಕ್ಷಣಕ್ಕೆ ಎಷ್ಟು ಮಹತ್ವ ಸಲ್ಲಬೇಕೋ ಅಷ್ಟು ಮಹತ್ವವನ್ನು ನಮ್ಮ ಸರ್ಕಾರಗಳು ನೀಡುತ್ತಿಲ್ಲ. ಅದರಲ್ಲೂ ಪ್ರಾಥಮಿಕ ಶಿಕ್ಷಣವು ಸರ್ಕಾರದ ನೀತಿ ನಿರೂಪಣೆ ಹಾಗೂ ಆಯವ್ಯಯಗಳಲ್ಲಿ ಆದ್ಯತೆಯ ಸಂಗತಿಯಾಗಿಲ್ಲ.

ಭಾರತವು ಒಂದು ಬೃಹತ್ತಾದ ದೇಶ. ಪ್ರಪಂಚದಲ್ಲೇ ಜನಸಂಖ್ಯೆಯಲ್ಲಿ ಎರಡನೆಯ ಸ್ಥಾನದಲ್ಲಿದೆ. ಹಲವು ಕೋಟಿ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಅವಕಾಶಗಳನ್ನು ಕಲ್ಪಿಸಿ, ಪರಿಣಾಮಕಾರಿಯಾಗಿ ಸಂಘಟಿಸುವುದು ಸುಲಭವಲ್ಲ. ಅಲ್ಲದೆ ಸ್ವಾತಂತ್ರ್ಯ ಬಂದಾಗ ಶೇ.೧೮ ರಷ್ಟು ಮಾತ್ರ ಸಾಕ್ಷರತೆ ಇದ್ದು, ಪ್ರಾಥಮಿಕ ಶಿಕ್ಷಣ ಕಡ್ಡಾಯವೂ, ಸಾರ್ವತ್ರಿಕವೂ ಮತ್ತು ಉಚಿತವೂ ಆಗಿರಬೇಕೆಂಬ ನೀತಿ ಸ್ವಾತಂತ್ರ್ಯಾ ನಂತರ ರೂಪುಗೊಂಡಿತು. ಅಗಾಧ ಸಂಖ್ಯೆಯ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲು ಅಗತ್ಯವಾದ ಎಲ್ಲಾ ಸೌಲತ್ತುಗಳನ್ನು ಒದಗಿಸುವುದು ಎಂತಹ ದೊಡ್ಡ ಜವಾಬ್ದಾರಿ ಎನ್ನುವುದನ್ನು ಊಹಿಸುವುದು ಕಷ್ಟ. ಆದರೆ ಪ್ರಜಾಪ್ರಭುತ್ವದ ಏಳಿಗೆಗೆ, ರಾಷ್ಟ್ರದ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗೆ ಸಾಕ್ಷರತೆ/ಶಿಕ್ಷಣ ಅನಿವಾರ್ಯ ಎಂಬುವುದು ತಿಳಿದಿದೆ. ವಿಶಾಲವಾದ ವೈವಿಧ್ಯತೆಯಿಂದ ಕೂಡಿರುವ ನಮ್ಮ ದೇಶದ ಶೈಕ್ಷಣಿಕ ಆಡಳಿತವನ್ನು ಒಂದೇ ಹಂತದಲ್ಲಿ ನಿರ್ವಹಿಸುದು ಸಾಧ್ಯವಿಲ್ಲ. ಈ ಅಂಶವನ್ನು ಮನಗಂಡ ಭಾರತ ಸರ್ಕಾರವು ವಿವಿಧ ಹಂತಗಳಲ್ಲಿ ಆಡಳಿತ ನಡೆಯುವಂತೆ ಕಾರ್ಯವಿಧಾನಗಳನ್ನು ರೂಪಿಸಿದೆ. ಇದರಂತೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸ್ಥಳೀಯ ಆಡಳಿತ ಸಂಸ್ಥೆಗಳು, ಖಾಸಗಿ ಸಂಸ್ಥೆಗಳು ಮತ್ತು ಶಾಲೆಗಳ ಮಟ್ಟದಲ್ಲಿ ಶೈಕ್ಷಣಿಕ ಆಡಳಿತ ನಡೆಯುತ್ತದೆ. ಈ ಎಲ್ಲಾ ಹಂತಗಳ ನಡುವೆ ಸಾಮರಸ್ಯ, ಸಮಗ್ರತೆಯನ್ನು ಹೊಂದಿರಬೇಕು.

### ೫.ಸರ್ಕಾರದ ನೀತಿ ಮತ್ತು ಕಾರ್ಯಕ್ರಮ

ಸ್ವಾತಂತ್ರ್ಯ ನಂತರ ಶಿಕ್ಷಣವನ್ನು ಜನ ಸಮೂಹಕ್ಕೆ ಒದಗಿಸುವ ಜವಾಬ್ದಾರಿಯನ್ನು ಸರ್ಕಾರವು ವಹಿಸಿಕೊಂಡಿತು. ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸರ್ಕಾರದ ಪಾತ್ರ ನಿರ್ಣಾಯಕವಾದುದಾಗಿದೆ. ಶಿಕ್ಷಣವನ್ನು ಒದಗಿಸುವುದಕ್ಕೆ ಸಂಬಂಧಿಸಿದಂತೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು ತುಂಬಾ ಸರಳವಾಗಿವೆ. ಶಾಲೆಗೆ ಸಂಬಂಧಿಸಿದಂತೆ ಸೌಲಭ್ಯಗಳನ್ನು ಒದಗಿಸಿದರೆ ಸಾಕು, ಜನರು ಶಿಕ್ಷಣ ಸೌಲಭ್ಯವನ್ನು ಪಡೆದುಕೊಳ್ಳುತ್ತಾರೆ ಎಂಬುದು ಸರ್ಕಾರವು ಅನುಸರಿಸಿಕೊಂಡು ಬರುತ್ತಿರುವ ನೀತಿಯಾಗಿದೆ.

ಶಾಲಾ ಕಟ್ಟಡ, ಶಿಕ್ಷಕರು ಮತ್ತು ಪಠ್ಯಪುಸ್ತಕ ಮುಂತಾದವುಗಳನ್ನು ಒದಗಿಸುವುದೇ ಶಿಕ್ಷಣ ಕಾರ್ಯಕ್ರಮವೆಂದು ಸರ್ಕಾರವು ಭಾವಿಸಿದಂತಿದೆ. ಆದರೆ ಈ ಸಮಸ್ಯೆಯನ್ನು ಸರ್ಕಾರ ತಿಳಿದುಕೊಂಡಷ್ಟು ಮುಗ್ಧವಾಗಿಲ್ಲ.

### ೬.ಶೈಕ್ಷಣಿಕ ನಿರ್ವಹಣೆ

ಶೈಕ್ಷಣಿಕ ನಿರ್ವಹಣೆ ಮುಖ್ಯವಾಗಿ ಎರಡು ಮಟ್ಟಗಳಲ್ಲಿ ನಡೆಯುತ್ತಿದೆ. ಮೊದಲನೆಯದಾಗಿ ಶೈಕ್ಷಣಿಕ ನೀತಿಗಳನ್ನು ರೂಪಿಸಿ ಕಾರ್ಯಗತಗೊಳಿಸುವ ಸರ್ಕಾರದ ಹಂತದಲ್ಲಿ ಸಾರ್ವಜನಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಶಿಕ್ಷಣ ಮಂತ್ರಿಗಳು, ಕಾರ್ಯದರ್ಶಿಗಳು, ಆಯುಕ್ತರು ಮತ್ತು ಅವರ ವ್ಯಾಪ್ತಿಯಲ್ಲಿ ಬರುವ ವಿವಿಧ ಸ್ತರದ ಅಧಿಕಾರಿಗಳು ಇಡೀ ರಾಜ್ಯದ ಶಿಕ್ಷಣ ಪ್ರಕ್ರಿಯೆಯ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ.

ಎರಡನೆಯ ಹಂತದಲ್ಲಿ ಪ್ರತಿ ಶಿಕ್ಷಣ ಸಂಸ್ಥೆ ಅಥವಾ ಶಾಲೆ ಇರುತ್ತದೆ. ಶಾಲೆಯನ್ನು ಅಲ್ಲಿನ ಮುಖ್ಯಸ್ಥರು ಮತ್ತು ಸಹೋದ್ಯೋಗಿಗಳು ನಿರ್ವಹಿಸುತ್ತಾರೆ.

ನಿರ್ವಹಣೆ ಎಂಬುವುದು ಒಂದು ವ್ಯಾಪಕವಾದ ಪದ. ಶೈಕ್ಷಣಿಕ ಅಥವಾ ಇನ್ನಾವುದೇ ಕಾರ್ಯ ಚಟುವಟಿಕೆ ಮತ್ತು ವಿವಿಧ ಘಟಕಾಂಶಗಳ ನಡುವೆ ಸಂಬಂಧ ಕಲ್ಪಿಸಿ ಸಮನ್ವಯತೆ ಮತ್ತು ಸಮಗ್ರತೆಯನ್ನು ಉಂಟು ಮಾಡುವುದೇ ನಿರ್ವಹಣೆ. ಒಂದು ಕಾರ್ಯದ ಉದ್ದೇಶ ಸಾಧಿಸುವದಕ್ಕಾಗಿ ಕೈಗೊಳ್ಳುವ ಸುವ್ಯವಸ್ಥಿತವಾದ ಏರ್ಪಾಡುಗಳಿಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಣೆ ಎನ್ನಬಹುದು. ನಮ್ಮ ಮಕ್ಕಳಿಗೆ/ವಿದ್ಯಾರ್ಥಿಗಳಿಗೆ ಗರಿಷ್ಠ ಮಟ್ಟ ಸಹಾಯ ಸೌಲಭ್ಯಗಳನ್ನು ದೊರಯಲೆಂದು ಗುರಿಗಳನ್ನು ಸಾಧಿಸಲೆಂದು ಕೈಗೊಳ್ಳುವ ಪ್ರಾಯೋಗಿಕ/ಕ್ರಿಯಾತ್ಮಕ ಕ್ರಮಗಳೇ ನಿರ್ವಹಣೆ. ಸರಳವಾಗಿ ಹೇಳುವುದಾದರೆ ಯಾವುದೇ ಒಂದು ಕಾರ್ಯವನ್ನು ಗುರಿ ಸಾಧನೆಯತ್ತ ಸಾಗುವಂತೆ ಮಾಡಲು ಅಗತ್ಯವಾದ ವ್ಯವಸ್ಥೆ ಮಾಡಿ, ಸಂಘಟಿಸಿ, ಅಪೇಕ್ಷಿತ ದಿಕ್ಕಿನಲ್ಲಿ ಮುನ್ನಡೆಸುವುದೇ ನಿರ್ವಹಣೆಯ ಕಾರ್ಯ.

ಶೈಕ್ಷಣಿಕ ನಿರ್ವಹಣೆ ಎಂದರೆ ಶಿಕ್ಷಣವನ್ನು ಕುರಿತು ವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಚಿಂತಿಸುವುದು, ಶಿಕ್ಷಣ ಕಾರ್ಯದಲ್ಲಿ ಏನು ಮಾಡಬೇಕು, ಹೇಗೆ ಮಾಡಬೇಕೆಂಬುದನ್ನು ಕ್ರಿಯಾತ್ಮಕವಾಗಿ ವಿವರಿಸುವುದಾಗಿದೆ. ಶಿಕ್ಷಣ ಮತ್ತು ಸಮಾಜಗಳ ನಡುವೆ ಸಮನ್ವಯ ಉಂಟಾಗುವಂತೆ ಮಾಡುವುದೇ ಉತ್ತಮ ಶೈಕ್ಷಣಿಕ ನಿರ್ವಹಣೆ.

*2.ಶಾಲಾ ಆಡಳಿತ*

ಶಾಲಾ ನಿರ್ವಹಣೆ ಮತ್ತು ಶಾಲಾ ಆಡಳಿತಗಳ ನಡುವೆ ಪ್ರಮುಖವಾದ ಕೆಲವು ಅರ್ಥ ವ್ಯತ್ಯಾಸಗಳಿವೆ. ಏಕೆಂದರೆ ಆಡಳಿತ ಮತ್ತು ನಿರ್ವಹಣೆಗಳೆರಡು ಭಿನ್ನವಾದ ಪ್ರಕ್ರಿಯೆಗಳಾಗಿವೆ.

**"ಶಾಲಾ ಆಡಳಿತವು ಶಿಕ್ಷಣ ಪ್ರಕ್ರಿಯೆಯ ಕೇಂದ್ರ. ಧಕ್ಷ ಆಡಳಿತ ಇಲ್ಲದಿದ್ದರೆ ಎಲ್ಲಾ ಯೋಜನೆಗಳು, ನೀತಿಗಳು ಮತ್ತು ಪ್ರಚಲಿತ ರೂಢಿ ರೀತಿಗಳು ನಿಷ್ಫಲವಾಗುತ್ತವೆಂದು"** ಡಾ. ಜಸ್ವಂತ ಸಿಂಗ್ ಹೇಳಿದ್ದಾರೆ.

**"ಶಾಲಾ ಆಡಳಿತವೆಂದರೆ ಕೇವಲ ವೇಳಾಪಟ್ಟಿ, ಪಠ್ಯವಸ್ತು ಇತ್ಯಾದಿಗಳನ್ನು ಒದಗಿಸಿ, ದಾಖಲೆಗಳನ್ನು ನಿರ್ವಹಿಸುವುದೆಂದಲ್ಲ. ಬದಲಾಗಿ ವಿದ್ಯಾರ್ಥಿಗಳೊಂದಿಗೆ ಕೆಲಸ ಮಾಡುವುದರ ಬಗ್ಗೆ ನಮಗಿರುವ ಮನೋಧೋರಣೆ"** ಎಂದು ರೈಬರ್ನ್‌ರವರು ಹೇಳಿದ್ದಾರೆ. ಇವರ ಅಭಿಪ್ರಾಯದಲ್ಲಿ ಶಾಲಾ ಆಡಳಿತವೆಂದರೆ **"ಮಕ್ಕಳ ಗರಿಷ್ಠ ವಿಕಾಸ ಮತ್ತು ಸಹಾಯಕ್ಕಾಗಿ ಹಾಗೂ ಶಿಕ್ಷಣದ ಗುರಿ ಸಾಧನೆಗಾಗಿ ನಮಗೆ ಹೆಚ್ಚಿನ ಸಹಾಯ ಒದಗಿಸುವ, ನಮ್ಮ ಕಾರ್ಯಚಟುವಟಿಕೆಗಳು ತಪ್ಪದೇ ನಡೆಯಲು ಅಳವಡಿಸಿಕೊಳ್ಳುವ ಕ್ರಮಗಳೇ ಆಗಿವೆ".**

ಶಾಲಾ ಆಡಳಿತವು ಶಾಲೆಯ ದಕ್ಷ ಕಾರ್ಯ ನಿರ್ವಹಣೆಗಾಗಿ ಅತ್ಯವಶ್ಯವಾಗಿದೆ. ನಿರ್ಧಿಷ್ಟ ಸಾಧನೆಗಾಗಿ ಮಾಡಿಕೊಂಡಿರುವ ಕ್ರಮಬದ್ಧ ವ್ಯವಸ್ಥೆಯೇ ಶಾಲಾ ಆಡಳಿತ.

### *೮.ಶಾಲೆ ಸಮುದಾಯದ ಅಂಗ*

ಸಮುದಾಯವಿಲ್ಲದೆ ಶಾಲೆ ಇಲ್ಲ. ಶಾಲೆ ಸಮುದಾಯದ ಕೇಂದ್ರ. ಶಾಲೆಯ ಸಮಸ್ತ ಕಾರ್ಯಗಳಲ್ಲಿ ಸಮುದಾಯದ ಸಹಭಾಗಿತ್ವ ಅವಶ್ಯ. ಮುಖ್ಯ ಶಿಕ್ಷಕರು, ಆಡಳಿತಗಾರರು, ಪೋಷಕರು ಶಾಲೆಗೆ ಭೇಟಿ ನೀಡುವುದನ್ನು ಉತ್ತೇಜಿಸಬೇಕು. ಇದಕ್ಕಾಗಿ ಸೂಕ್ತ ಅವಕಾಶಗಳನ್ನು, ಸಂದರ್ಭಗಳನ್ನು ಕಲ್ಪಿಸಬೇಕು. ಪೋಷಕರು, ಸಮುದಾಯದ ಇತರರು ಶಾಲೆಗೆ ಬಂದಾಗ ಸಹೃದಯತೆಯಿಂದ ಸ್ವಾಗತಿಸಬೇಕು. ಆದರೆ ಮಕ್ಕಳ ಶೈಕ್ಷಣಿಕ ಪ್ರಗತಿಗೆ ಅವಶ್ಯವಾದ ಅಂಶಗಳನ್ನು ಮಾತ್ರ ಚರ್ಚಿಸಬೇಕು. ಶಾಲೆಯ ಸಾಧನೆಗಳು ಎಲ್ಲರಿಗೂ ತಿಳಿಯುವಂತಹ ಕಾರ್ಯಕ್ರಮಗಳನ್ನು ರೂಪಿಸಿ ಸಮುದಾಯದ ಸಂಪನ್ಮೂಲಗಳು ಲಭ್ಯವಾಗುವಂತೆ ಮಾಡಬೇಕು.

### *೯.ಸರ್ಕಾರದ ಜವಾಬ್ದಾರಿ ಹಾಗೂ ಪಾತ್ರ*

ನಮ್ಮ ರಾಜ್ಯಾಂಗವು ೧೯೭೬ ರಲ್ಲಿ ಶಿಕ್ಷಣವನ್ನು ಸಮವರ್ತಿ ಪಟ್ಟಿಗೆ ಸೇರಿಸಿ ತಿದ್ದುಪಡಿ ಮಸೂದೆ ಜಾರಿಗೊಳಿಸಿದೆ. ಇದರಿಂದಾಗಿ ಶೈಕ್ಷಣಿಕ ಆಡಳಿತದ ಜವಾಬ್ದಾರಿ ಕೇಂದ್ರ, ರಾಜ್ಯ ಮತ್ತು ಸ್ಥಳೀಯ ಸರ್ಕಾರಗಳಲ್ಲಿ ನಿರ್ದಿಷ್ಟ ರೀತಿಯಲ್ಲಿ ಹಂಚಿಕೆಯಾಗಿದೆ.

ಕೇಂದ್ರ ಸರ್ಕಾರವು ದೇಶದ ಶಿಕ್ಷಣ ವ್ಯವಸ್ಥೆಗೆ ನಾಯಕನಂತಿದ್ದು ರಾಷ್ಟ್ರೀಯ ಗುರಿಗಳ ಸಾಧನೆಗಾಗಿ ರಾಜ್ಯಗಳಲ್ಲಿ ಶಿಕ್ಷಣ ನೀತಿ ಹಾಗೂ ಕಾರ್ಯಕ್ರಮಗಳು ರೂಪಗೊಳ್ಳುವ ಚೌಕಟ್ಟನ್ನು ಒದಗಿಸುತ್ತದೆ. ಈ ದೃಷ್ಟಿ ಯಿಂದ ಶೈಕ್ಷಣಿಕ ಆಡಳಿತದಲ್ಲಿ ಕೇಂದ್ರದ ಪಾತ್ರವನ್ನು ಈ ಕೆಳಗಿನಂತೆ ವಿವರಿಸಿದೆ.

**i. ಸಂಘಟನೆ:-**

ರಾಷ್ಟ್ರದಲ್ಲಿ ಶೈಕ್ಷಣಿಕ ಕಾರ್ಯ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ಸಂಘಟಿಸಲು ಕೇಂದ್ರ ಸರ್ಕಾರವು ಹಲವಾರು ಮಂಡಳಿಗಳು, ಸಮಿತಿಗಳು ಮತ್ತು ಸಂಸ್ಥೆಗಳನ್ನು ರಚಿಸಿದೆ. ಇಂತಹ ವಿವಿಧ ಅಂಗಗಳು ತಮಗೆ ವಹಿಸಿರುವ ನಿರ್ದಿಷ್ಟ ಕ್ಷೇತ್ರದಲ್ಲಿ ಶೈಕ್ಷಣಿಕ ಕಾರ್ಯಗಳನ್ನು ಸಂಘಟಿಸುವುದು ಮೇಲ್ವಿಚಾರಣೆ, ಸಲಹೆ, ನಿಯಂತ್ರಣ, ಪಠ್ಯಕ್ರಮಗಳ ರೂಪುರೇಷೆ ರಚನೆ ಇತ್ಯಾದಿ ಜವಾಬ್ದಾರಿಗಳನ್ನು ನಿರ್ವಹಿಸುತ್ತವೆ. ಕೆಲವು ಸಂಸ್ಥೆ, ಮಂಡಳಿಗಳನ್ನು ಹೆಸರಿಸುವುದಾದರೆ, **"ಕೇಂದ್ರೀಯ ಶಿಕ್ಷಣ ಸಲಹಾ ಮಂಡಳಿ (CABE), ಅಖಿಲ ಭಾರತ ಪ್ರೌಢ ಶಿಕ್ಷಣ ಸಮಿತಿ (AICSE), ಅಖಿಲ ಭಾರತ ಪ್ರಾಥಮಿಕ ಶಿಕ್ಷಣ ಸಮಿತಿ(AICEE), ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಸಂಸ್ಥೆ (NCERT), ರಾಷ್ಟ್ರೀಯ ಶಿಕ್ಷಕ ಶಿಕ್ಷಣ ಸಮಿತಿ (NCTE)"** ಮುಂತಾದವು.

**ii. ಯೋಜನೆ:-**

ರಾಷ್ಟ್ರೀಯ ಗುರಿಗಳು, ಅವಶ್ಯಕತೆಗಳು, ಮತ್ತೆ ವೈವಿಧ್ಯಮಯ ಸಮುದಾಯಗಳನ್ನು, ಗಮನದಲ್ಲಿಟ್ಟುಕೊಂಡು, ಇವೆಲ್ಲವುಗಳ ಸಮನ್ವಯದಿಂದ ಮಾತ್ರವೇ ಏಕರೂಪತೆಯ ಶೈಕ್ಷಣಿಕ ಆಡಳಿತ ಸಾಧ್ಯವೆಂಬುದನ್ನು ಅರಿತು ಕೇಂದ್ರ ಸರ್ಕಾರವು ವ್ಯಾಪಕವಾದ ಅಡಿಪಾಯವುಳ್ಳ ಶಿಕ್ಷಣ ರೀತಿಗಳನ್ನು ರೂಪಿಸುತ್ತದೆ. ಉದಾಹರಣೆಗೆ: ೧೯೮೬ ರ ರಾಷ್ಟ್ರೀಯ ಶಿಕ್ಷಣ ನೀತಿ. ಶಾಲಾ ಮಟ್ಟದಲ್ಲಿ ಪಠ್ಯಕ್ರಮ ಹೇಗಿರಬೇಕೆಂಬುದರ ರೂಪುರೇಷೆಗಳನ್ನು ಸೂಚಿಸುತ್ತದೆ. (Curriculum Framework). ಸಾಕ್ಷರತೆ ಮತ್ತು ಶಿಕ್ಷಣ ಸಾರ್ವತ್ರೀಕರಣ, ಗುಣಮಟ್ಟದ ಉನ್ನತ ಶಿಕ್ಷಣ ಅರ್ಹರೆಲ್ಲರಿಗೂ ಸಾಮಾಜಿಕ ನ್ಯಾಯದ ಆಧಾರದ ಮೇಲೆ ದೊರೆಯುವಂತೆ ಕೇಂದ್ರ ಸರ್ಕಾರ ನೀತಿಗಳನ್ನು ರೂಪಿಸುತ್ತದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಈ ನೀತಿಗಳನ್ನು ಅನುಷ್ಠಾನಕ್ಕೆ ತರಲು ಹಣಕಾಸಿನ ಅನೂಕೂಲತೆ ಒದಗಿಸುತ್ತದೆ. ಶಿಕ್ಷಣದ ವಿವಿಧ ಸ್ತರಗಳ ವಸ್ತು ಸ್ಥಿತಿ, ಅಗತ್ಯ ಬದಲಾವಣೆಗಳ ಅಧ್ಯಯನಕ್ಕಾಗಿ ಆಗಾಗ್ಗೆ ಶಿಕ್ಷಣ ಆಯೋಗಗಳನ್ನು ರಚಿಸುತ್ತದೆ. ಉದಾಹರಣೆಗೆ: ಪ್ರೌಢ ಶಿಕ್ಷಣ ಆಯೋಗ (೧೯೫೨-೫೩) ಭಾರತೀಯ ಶಿಕ್ಷಣ ಆಯೋಗ (೧೯೬೪-೬೬).

**iii. ನಿಯಂತ್ರಣ ಮತ್ತು ನಿರ್ದೇಶನ:-**

ಶಿಕ್ಷಣವು ಪ್ರಮುಖವಾಗಿ ರಾಜ್ಯಗಳಿಗೆ ಸಂಬಂಧಿಸಿದ ವಿಷಯವಾಗಿದ್ದು, ರಾಜ್ಯಗಳು ತಮ್ಮ ಸಾಮಾಜಿಕ, ಭೌಗೋಳಿಕ, ಆರ್ಥಿಕ ಅವಶ್ಯಕತೆಗಳನ್ನು ಆಧರಿಸಿ ಶಿಕ್ಷಣ ನೀತಿಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತವೆ. ಆದರೆ ಈ ಎಲ್ಲಾ ಪ್ರಯತ್ನಗಳು ರಾಷ್ಟ್ರೀಯ ಗುರಿ, ನೀತಿಗಳಿಗೆ ಹೊಂದುವಂತಿರಬೇಕು. ಮೂಲಭೂತ ಸ್ವರೂಪದ ಚೌಕಟ್ಟಿನೊಳಗೆ ರಾಜ್ಯಗಳು ತಮ್ಮದೇ ಆದ ಶೈಕ್ಷಣಿಕ ಯೋಜನೆಗಳನ್ನು ರೂಪಿಸಬೇಕೆಂಬ ದೃಷ್ಟಿಯಿಂದ ಕೇಂದ್ರ ಸರ್ಕಾರವು ರಾಜ್ಯಗಳ ಶಿಕ್ಷಣ ನೀತಿಗಳನ್ನು ನಿರ್ದೇಶಿಸಿ, ನಿಯಂತ್ರಿಸುತ್ತದೆ. ರಾಜ್ಯಗಳಿಗೆ ವಿವಿಧ ಶಾಲಾ ಸೌಲಭ್ಯಗಳನ್ನು ಒದಗಿಸಲು ಹಣಕಾಸಿನ ಸಹಾಯವನ್ನು ನೀಡುತ್ತದೆ. ಉದಾಹರಣೆಗೆ:Operation Black Board. ಕಪ್ಪು ಹಲಗೆ ಕಾರ್ಯಾಚರಣೆ

ರಾಜ್ಯ ಮಟ್ಟದ ಶೈಕ್ಷಣಿಕ ಆಡಳಿತ ಸುಸೂತ್ರವಾಗಿ ನಡೆಯಲು ಶಿಕ್ಷಣ ಇಲಾಖೆ ವ್ಯವಸ್ಥಿತ ಆಡಳಿತ ವಿಧಾನವನ್ನು ರೂಪಿಸಿದೆ. ಆದರೂ ರಾಜ್ಯ ಮಟ್ಟದಲ್ಲಿಯೇ ಸಂಪೂರ್ಣವಾಗಿ ಆಡಳಿತ ನಿರ್ವಹಣೆ ಸಾಧ್ಯವಿಲ್ಲ, ಸರಿಯೂ ಅಲ್ಲ. ಆಡಳಿತ ವಿಕೇಂದ್ರಿಕರಣ ತತ್ವವನ್ನು ಒಪ್ಪಿಕೊಂಡಿರುವುದರಿಂದ ಅದರ ಅನುಷ್ಠಾನಕ್ಕಾಗಿ ಸ್ಥಳೀಯ ಸಂಸ್ಥೆಗಳಿಗೂ ಸಾಕಷ್ಟು ಅಧಿಕಾರ ನೀಡಲಾಗಿದೆ.

ಜಿಲ್ಲಾ ಪಂಚಾಯಿತಿ, ಪುರಸಭೆಗಳು, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿ ಸಂಸ್ಥೆಗಳು ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣಕ್ಕಾಗಿ ಆಡಳಿತಾತ್ಮಕವಾಗಿ ಮಹತ್ವದ ಪಾತ್ರ ನಿರ್ವಹಿಸುತ್ತವೆ. ಪುರಸಭೆಗಳ ಆಯವ್ಯಯ ಪಟ್ಟಿಯಲ್ಲಿ ಶಿಕ್ಷಣಕ್ಕೂ ಪಾಲು ನಿಗಧಿ ಪಡಿಸಲಾಗಿದೆ. ಇತರ ಸ್ಥಳೀಯ ಸಂಸ್ಥೆಗಳು ರಾಜ್ಯ ಸರ್ಕಾರದ ಯೋಜನೆಗಳನ್ನು, ಅನುಷ್ಠಾನ ಗೊಳಿಸಲು ಸಹಾಯ ಮಾಡುತ್ತಿವೆ. ವಿವಿಧ ಹಂತಗಳಲ್ಲಿ ಶಿಕ್ಷಣ ಸಮಿತಿಗಳು ರೂಪುಗೊಂಡಿದ್ದು, ಅವುಗಳ ಕಾರ್ಯ ನಿರ್ವಹಣೆಗೆ ಸಹಕಾರ ನೀಡುತ್ತಿವೆ. ಪಂಚಾಯಿತಿಯ ನಿಧಿಯಿಂದ ಶಾಲಾ ಕಟ್ಟಡ, ದುರಸ್ಥಿ ಮುಂತಾದ ಕಾರ್ಯಗಳಿಗೆ ಧನ ಸಹಾಯವನ್ನು ಮಾಡುತ್ತವೆ. ಜಿಲ್ಲಾ, ತಾಲ್ಲೂಕ ಹಾಗೂ ಗ್ರಾಮ ಪಂಚಾಯಿತಿಗಳ ಸದಸ್ಯರು ಎಸ್.ಡಿ.ಎಮ್.ಸಿ. ಗಳ ಪದ ನಿಮಿತ್ತ ಸದಸ್ಯರು ಆಗಿರುವರು. ಎಸ್.ಡಿ.ಎಮ್.ಸಿ. ಸಭೆಗಳಲ್ಲಿ ಹಾಜರಿದ್ದು ಅಲ್ಲಿನ ಚರ್ಚೆಗಳಲ್ಲಿ ಭಾಗವಹಿಸಿ, ಶಾಲೆಯಲ್ಲಿ ಶಿಕ್ಷಣದ ಅಭಿವೃದ್ದಿ ಕಾರ್ಯಗಳಲ್ಲಿ ಸಕ್ರೀಯವಾಗಿ ಪಾತ್ರ ವಹಿಸುವರು. ಗ್ರಾಮ ಪಂಚಾಯಿತಿ ಪ್ರಾಥಮಿಕ ಶಿಕ್ಷಣ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುವುದು. ತನ್ನ ವ್ಯಾಪ್ತಿಯ ಶಾಲೆಗಳಿಗೆ ಭೇಟಿ, ವೀಕ್ಷಣೆ, ಮೇಲುಸ್ತುವಾರಿಗಳನ್ನು ನಡೆಸುತ್ತದೆ. ಬಡ ಮಕ್ಕಳಿಗೆ ಉಚಿತ ಸಮವಸ್ತ್ರಗಳ ಹಂಚಿಕೆ, ಪರಿಶಿಷ್ಟ ಜಾತಿ, ವರ್ಗಗಳ ವಿದ್ಯಾರ್ಥಿಗಳಿಗೆ ಸಹಾಯ, ಮಧ್ಯಾಹ್ನದ ಉಪಹಾರ ಯೋಜನೆ ಮೇಲುಸ್ತುವಾರಿ ಹಾಗೂ ಆಯೋಜನೆಗಳೂ ಸ್ಥಳಿಯ ಸಂಸ್ಥೆಗಳ ಜವಾಬ್ದಾರಿಯಾಗಿದೆ. ಜೊತೆಗೆ ದಾಖಲಾತಿ ಆಂದೋಲನ ಉತ್ತೇಜಿಸಿ, ಸಾರ್ವತ್ರಿಕ ದಾಖಲಾತಿಗೆ ಸಹಾಯ ಮಾಡುವುದು ಮತ್ತೊಂದು ಜವಾಬ್ದಾರಿಯಾಗಿದೆ.

ಭಾರತದ ಸಂವಿಧಾನವು ಖಾಸಗಿ ಸಂಸ್ಥೆಗಳಿಗೆ, ವ್ಯಕ್ತಿಗಳಿಗೆ ಶಾಲೆಗಳನ್ನು ಪ್ರಾರಂಭಿಸಿ ನಡೆಸುವ ಹಕ್ಕನ್ನು ನೀಡಿದೆ. ಭಾರತದಂತ ಅಗಾಧ ಜನಸಂಖ್ಯೆ ಇರುವ ದೇಶದಲ್ಲಿ ಕೋಟ್ಯಾಂತರ ಮಕ್ಕಳಿಗೆ ಶಿಕ್ಷಣ ನೀಡಲು ಎಲ್ಲಾ ವ್ಯವಸ್ಥೆಯನ್ನು ಸರ್ಕಾರವೇ ಮಾಡುವುದು ಅಸಾಧ್ಯ. ನಮ್ಮ ರಾಜ್ಯದಲ್ಲಿಯೂ ಹಲವಾರು ಖಾಸಗಿ ಪ್ರಾಥಮಿಕ ಶಾಲೆಗಳಿವೆ ಇಂತಹ ಶಾಲೆಗಳನ್ನು ಧಾರ್ಮಿಕ ಸಂಸ್ಥೆಗಳು, ದತ್ತಿಗಳು, ಖಾಸಗಿ ಸಂಸ್ಥೆಗಳು, ವ್ಯಕ್ತಿಗಳು ನಡೆಸುತ್ತಿದ್ದಾರೆ.

## ೩.ಅಧ್ಯಯನದ ಮಹತ್ವ

ಭಾರತ ದೇಶವು ಶಿಕ್ಷಣಕ್ಕೆ ಮಹತ್ವ ಕೊಟ್ಟು ಅದರ ಬಗ್ಗೆ ಅನಾದಿಕಾಲದಿಂದಲೂ ಅರಿವು ಹೊಂದಿರುವ ದೇಶ. ಸ್ವಾತಂತ್ರ್ಯದ ನಂತರ ಎಲ್ಲಾ ರಾಜ್ಯಗಳು ತಮ್ಮದೇ ಆದ ಶೈಕ್ಷಣಿಕ ವ್ಯವಸ್ಥೆಗಳನ್ನು, ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಾ ಶಿಕ್ಷಣವು ಎಲ್ಲರಿಗೂ ತಲುಪುವಂತೆ ಶತಾಯ-ಗತಾಯ ಪ್ರಯತ್ನಿಸುತ್ತಾ ಬಂದಿವೆ.

ಕೇಂದ್ರ ಸರ್ಕಾರದ ಮಟ್ಟದಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಬಹುತೇಕ ಈ ಕ್ರಮಗಳು ನೀತಿಗಳನ್ನು ರೂಪಿಸಿ ಒದಗಿಸುವಂತಹವುದಾಗಿದೆ. ಮೊಟ್ಟಮೊದಲಿಗೆ ಸಂವಿಧಾನದ ೪೫ ನೇಯ ಪರಿಚ್ಛೇಧದಲ್ಲಿ ಪ್ರಾಥಮಿಕ ಶಿಕ್ಷಣವು ಉಚಿತ ಮತ್ತು ಕಡ್ಡಾಯ ಆಗಬೇಕೆಂಬ ಗುರಿಯನ್ನು ಸಂವಿಧಾನ ಜಾರಿಗೆ ಬಂದ ಹತ್ತು ವರ್ಷಗಳೊಳಗೆ ಮುಟ್ಟಬೇಕೆಂದು ಸೂಚಿಸಲಾಯಿತು.

ಆದರೆ ಸರ್ಕಾರಗಳು ಕೈಗೊಂಡ ಯಾವ ಕ್ರಮಗಳೂ, ಯೋಜನೆಗಳೂ ನಿರೀಕ್ಷಿತ ಫಲವನ್ನು ಸಾಧಿಸಲಾರದೇ ಹೋದವು. ಇದನ್ನು ಅರಿತ ಸರ್ವಶಿಕ್ಷಣ ಅಭಿಯಾನದ ಅಡಿಯಲ್ಲಿ ಸಮುದಾಯದ ಸಹಭಾಗಿತ್ವದಲ್ಲಿ ಗುಣಾತ್ಮಕ ಶಾಲಾ ಶಿಕ್ಷಣವನ್ನು ಸಾಧಿಸೋಣ ಎಂಬ ಆಶಯದೊಂದಿಗೆ ಎಸ್.ಡಿ.ಎಮ್.ಸಿ. ಗಳ ರಚನೆಯನ್ನು ಕರ್ನಾಟಕ ರಾಜ್ಯ ಸರ್ಕಾರವು ೨೮/೦೪/೨೦೦೧ ರಂದು ಆದೇಶ ಹೊರಡಿಸಿ ಸಮುದಾಯದ ಸಹಭಾಗಿತ್ವಕ್ಕೆ ಅನೂಕೂಲ ಕಲ್ಪಿಸಿತು.

ಎಸ್.ಡಿ.ಎಮ್.ಸಿ. ಗಳ ರಚನೆಯಿಂದ ಪೋಷಕರು ಹಾಗೂ ಪಾಲಕರು ಶಾಲಾ ಆಡಳಿತದಲ್ಲಿ ನೇರವಾದ ಜವಾಬ್ದಾರಿಯನ್ನು ಹೊರುವುದರಿಂದ ಸರ್ಕಾರಿ ಶಾಲೆಗಳು ನಿರೀಕ್ಷಿತ ಗುಣಮಟ್ಟದ ಶಿಕ್ಷಣವನ್ನು ಕೊಟ್ಟು ಸರ್ಕಾರಿ ಶಾಲೆಗಳೂ ಕೂಡಾ ಖಾಸಗಿ ಶಾಲೆಗಳಂತೆ ಅಭಿವೃದ್ಧಿ ಹೊಂದಲು ಅನುವು ಮಾಡಿತು.

ಸರ್ಕಾರಿ ಶಾಲೆಗಳು ಖಾಸಗಿ ಶಾಲೆಗಳಿಗೆ ಹೋಲಿಸಿದರೆ ಉತ್ತಮ ಫಲಿತಾಂಶವನ್ನು ಹೊರತರುವಲ್ಲಿ ಮತ್ತು ಗುಣಾತ್ಮಕ ಶಿಕ್ಷಣವನ್ನು ನೀಡುವಲ್ಲಿ ಕೊರತೆಯನ್ನು ಅನುಭವಿಸುತ್ತಿರುವುದು ಕಂಡು ಬರುತ್ತದೆ. ಈ ಕೊರತೆಯನ್ನು ನೀಗಿಸಲು ಸಮುದಾಯದ ಸಹಭಾಗಿತ್ವದಲ್ಲಿ ಸರ್ಕಾರಿ ***ಶಾಲೆಗಳ ಅಭಿವೃದ್ಧಿ ಮತ್ತು ಮೇಲುಸ್ತುವಾರಿ***ಗಾಗಿ ಇರುವ ಸಮಿತಿಗಳು ದಕ್ಷತೆಯಿಂದ ಕಾರ್ಯ ನಿರ್ವಹಿಸಿದರೆ ಹೇಗೆಲ್ಲಾ ಸಾಧಿಸಬಹುದು ಎಂಬುದನ್ನು ತಿಳಿಯಲು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮನ್ನಿಕೇರಿ ತೋಟದ ಶಾಲೆಯೊಂದನ್ನು ಅಧ್ಯಯನಕ್ಕೆ ಆಯ್ದುಕೊಂಡು ಎಸ್.ಡಿ.ಎಮ್.ಸಿ.ಯ ಸಾಧಕ-ಬಾಧಕಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

## ೪.ಅಧ್ಯಯನದ ಮಿತಿ

ಪ್ರಸ್ತುತ ಅಧ್ಯಯನವು ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯ, ರಾಯಬಾಗ ತಾಲೂಕಿನ ಹಿಡಕಲ್ಲ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮನ್ನಿಕೇರಿ ತೋಟ, ಹಿಡಕಲ್ಲಕ್ಕೆ ಸೀಮಿತವಾಗಿದೆ. ಈ ಶಾಲೆಯನ್ನು ಅಧ್ಯಯನಕ್ಕಾಗಿ ಒಂದು ಮಾದರಿಯನ್ನಾಗಿ ತೆಗೆದುಕೊಂಡು ಈ ಶಾಲೆಯಲ್ಲಿರುವ ಎಸ್.ಡಿ.ಎಮ್.ಸಿ.ಯು ಸಾಧಿಸಿರುವ ಸಾಧನೆಗಳನ್ನು ತಿಳಿದುಕೊಂಡು, ಸರ್ಕಾರಿ ಶಾಲೆಗಳಲ್ಲಿ ಯಾವ ರೀತಿಯ ಬದಲಾವಣೆಗಳನ್ನು, ಅಭಿವೃದ್ಧಿ ಮತ್ತು ಶಾಲಾ ಆಡಳಿತವನ್ನು ನಿರೀಕ್ಷಿತ ಮಟ್ಟಕ್ಕೆ ಎಸ್.ಡಿ.ಎಮ್.ಸಿ. ಕೊಂಡೊಯ್ಯುತ್ತದೆ ಎಂಬುದರ ಅಧ್ಯಯನವಾಗಿದೆ.

## ೫.ಅಧ್ಯಯನದ ಉದ್ದೇಶಗಳು

I. ಎಸ್.ಡಿ.ಎಮ್.ಸಿ. ಗಳ ರಚನೆಯ ಹಿನ್ನೆಲೆ ಅಭ್ಯಸಿಸುವುದು.
II. ಶಾಲಾ ಸುಧಾರಣಾ ಪರಿಕಲ್ಪನೆ ಮತ್ತು ಈ ಹಿಂದಿನ ಯೋಜನೆಗಳನ್ನು ಚರ್ಚಿಸುವದು.
III. ಎಸ್.ಡಿ.ಎಮ್.ಸಿ. ಗಳ ಕಾರ್ಯಚಟುವಟಿಕೆಗಳನ್ನು ವಿಶ್ಲೇಷಿಸುವದು.
IV. ಎಸ್.ಡಿ.ಎಮ್.ಸಿ. ಗಳ ಸಾಫಲ್ಯ-ವೈಫಲ್ಯಗಳ ಸಮೀಕ್ಷೆ ಮಾಡುವದು.
V. ಅಧ್ಯಯನದ ಆಧಾರದ ಮೇಲೆ ಕಂಡುಕೊಂಡ ಫಲಿತಗಳನ್ನು ದಾಖಲಿಸುವದರ ಜೊತೆಗೆ ಸೂಕ್ತ ಸಲಹೆಗಳನ್ನು ನೀಡುವದು.

## ೬.ಅಧ್ಯಯನದ ವಿಧಾನ

ಈ ಅಧ್ಯಯನವು ಶಿಸ್ತುಬದ್ಧವಾಗಿ ಮತ್ತು ಗುಣಾತ್ಮಕವನ್ನಾಗಿ ಮಾಡುವ ಸಲುವಾಗಿ ಪ್ರಾಥಮಿಕ ಮತ್ತು ಅನುಷಂಗಿಕ ವಿಧಾನಗಳನ್ನು ಬಳಸಿಕೊಂಡು ಮಾಹಿತಿಗಳನ್ನು, ಅಂಕಿ-ಸಂಖ್ಯೆಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಿ ಅಧ್ಯಯನ ಕೈಗೊಳ್ಳಲಾಗಿದೆ.

### ೧ ಪ್ರಾಥಮಿಕ

ಈ ವಿಧಾನದಲ್ಲಿ ಶಾಲೆಯ ಮುಖ್ಯೋಪಾಧ್ಯಾಯರು ಹಾಗೂ ಶಿಕ್ಷಕರು, ಪಾಲಕರು/ಪೋಷಕರು, ಶಾಲೆಯಲ್ಲಿ ಓದುತ್ತಿರುವ ಮಕ್ಕಳಿಗೆ ಹಾಗೂ ಎಸ್.ಡಿ.ಎಮ್.ಸಿ. ಸದಸ್ಯರುಗಳಿಗೆ ಸಂದರ್ಶನ ಮಾಡಿ, ಬೇಕಾಗಿರುವ ವಿವಿಧ ಮಾಹಿತಿಗಳನ್ನು ಪಡೆದುಕೊಂಡಿದೆ ಮತ್ತು ಪ್ರಶ್ನಾವಳಿಗಳನ್ನು ರೂಪಿಸಿ ಅದಕ್ಕೆ ಉತ್ತರವನ್ನು ಪಡೆದುಕೊಂಡಿದೆ.

**೨ ಅನುಷಂಗಿಕ**

ಶಿಕ್ಷಣ ಇಲಾಖೆಯ ಅಧಿಕಾರಿಗಳಿಂದ, ಸಂಪನ್ಮೂಲ ವ್ಯಕ್ತಿಗಳಿಂದ, ಪ್ರಬಂಧಗಳಿಂದ, ವರದಿಗಳಿಂದ ಶಿಕ್ಷಣ ಸಂಶೋಧನಾ ಸಂಸ್ಥೆಗಳಿಂದ ಹಾಗೂ ಸಂಬಂಧಪಟ್ಟ ಇಲಾಖೆಯಿಂದ, ಪುಸ್ತಕಗಳಿಂದ, ಕೈಪಿಡಿಗಳಿಂದ ಅಧ್ಯಯನ ಮಾಡಿ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

ಈ ಅಧ್ಯಯನವು ಶಾಲಾ ಆಧಾರಿತ ಆಗಿರುವದರಿಂದ ಇಲ್ಲಿ ಬರುವ ಶಬ್ದಗಳು ಗೊಂದಲಕ್ಕೆ ಕಾರಣವೆನಿಸಿದರೆ, ಅವುಗಳ ಅರ್ಥಗಳನ್ನು ಕೊಟ್ಟು ಅಧ್ಯಯನವು ಅತೀ ಸುಲಭವಾಗುವಂತೆ ಮಾಡಲಾಗಿದೆ.

***ಸಂದರ್ಶನಾರ್ಥಿಗಳ ಆಯ್ಕೆ:***

ಸಂದರ್ಶನ ಕ್ಷೇತ್ರಕ್ಕೆ ಆಯ್ಕೆ ಮಾಡಿಕೊಂಡಿರುವ ***ಹಿಡಕಲ್‌ನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟದ ಶಾಲೆಯ*** ಎಲ್ಲ ೭ ಜನ ಶಿಕ್ಷಕ ಸಿಬ್ಬಂದಿ, ಎಸ್.ಡಿ.ಎಮ್.ಸಿ.ಯ ಎಲ್ಲ ೧೯ ಜನ ಸದಸ್ಯರು, ೧೦ ಜನ ಪುರುಷ ಹಾಗೂ ೧೦ ಜನ ಮಹಿಳಾ ಪಾಲಕರು, ೩ನೇ ತರಗತಿಯಿಂದ ೮ನೇಯ ತರಗತಿಯವರೆಗಿನ ೧೦ ವಿದ್ಯಾರ್ಥಿ ಮತ್ತು ೧೦ ವಿದ್ಯಾರ್ಥಿನಿಯರನ್ನು ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ೭.ಅಧ್ಯಯನದ ವಿನ್ಯಾಸ

### ಅಧ್ಯಾಯ ಒಂದು

ಈ ಅಧ್ಯಾಯದಲ್ಲಿ ಪೀಠಿಕೆ, ಅಧ್ಯಯನದ ಪ್ರವೇಶ, ಅಧ್ಯಯನದ ಮಹತ್ವ, ಅಧ್ಯಯನದ ಉದ್ದೇಶ, ಸಂಶೋಧನೆಗಾಗಿ ಅನುಸರಿಸಿರುವ ಅಧ್ಯಯನ ವಿಧಾನ ಮತ್ತು ಮಾರ್ಗಗಳು, ಅಧ್ಯಯನ ಕ್ಷೇತ್ರದ ಮಿತಿ ಕುರಿತು ಚರ್ಚಿಸಲಾಗಿದೆ.

### ಅಧ್ಯಾಯ ಎರಡು

ಪೀಠಿಕೆ, ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರ ಶಾಲಾ ಸುಧಾರಣೆ ಪರಿಕಲ್ಪನೆ, ಶಾಲಾ ಸುಧಾರಣೆಗಾಗಿ ನಡೆದುಕೊಂಡು ಬಂದಿರುವ ಕಾರ್ಯಕ್ರಮಗಳ ಬಗ್ಗೆ, ಎಸ್.ಡಿ.ಎಮ್.ಸಿ. ನಡೆದು ಬಂದ ದಾರಿ, ಎಸ್.ಡಿ.ಎಮ್.ಸಿ. ರಚನೆ ಮತ್ತು ಅವುಗಳ ಕಾರ್ಯಗಳ ಬಗ್ಗೆ ತಿಳಿದುಕೊಳ್ಳುವ ಸಾಹಿತ್ಯದ ಅವಲೋಕನ, ಉಪಸಂಹಾರದೊಂದಿಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ಅಧ್ಯಾಯ ಮೂರು

ಈ ಅಧ್ಯಾಯದಲ್ಲಿ ಎಸ್.ಡಿ.ಎಮ್.ಸಿ. ಗಳ ಕಾರ್ಯ ಚಟುವಟಿಕೆಗಳನ್ನು ತಿಳಿಯಲು ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಶಾಲೆಯಲ್ಲಿ ಪ್ರಶ್ನಾವಳಿಗಳ ಮೂಲಕ ಸಿಬ್ಬಂದಿ, ಎಲ್ಲ ಎಸ್.ಡಿ.ಎಮ್.ಸಿ. ಸದಸ್ಯರ, ಪಾಲಕರ ಹಾಗೂ ವಿದ್ಯಾರ್ಥಿಗಳ ಅಭಿಪ್ರಾಯ ಸಂಗ್ರಹಿಸಿದ್ದನ್ನು ಚರ್ಚಿಸಲಾಗಿದೆ.

### ಅಧ್ಯಾಯ ನಾಲ್ಕು

ಈ ಅಧ್ಯಾಯದಲ್ಲಿ ಕ್ಷೇತ್ರಾಧ್ಯಯನದ ಮೂಲಕ ಸಂಗ್ರಹಿಸಿದ ಮಾಹಿತಿಯ ಹಿನ್ನೆಲೆಯಲ್ಲಿ ಎಸ್.ಡಿ.ಎಮ್.ಸಿ. ಯ ಸಾಫಲ್ಯ–ವೈಫಲ್ಯಗಳ ಕುರಿತು ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

### ಅಧ್ಯಾಯ ಐದು

ಈ ಅಧ್ಯಾಯದಲ್ಲಿ ಕ್ಷೇತ್ರಾಧ್ಯಯನದ ಆಧಾರದ ಮೇಲೆ ಕಂಡುಕೊಂಡ ಫಲಿತಗಳನ್ನು ದಾಖಲಿಸುವುದರ ಜೊತೆಗೆ ಸೂಕ್ತ ಸಲಹೆಗಳ ಬಗ್ಗೆ ಚರ್ಚಿಸಲಾಗಿದೆ.

### ಗ್ರಂಥಋಣ

### ಅನುಬಂಧ

# ಅಧ್ಯಾಯ – ೨

## ಶಾಲಾ ಸುಧಾರಣೆಯ ಪರಿಕಲ್ಪನೆ ಮತ್ತು ಯೋಜನೆಗಳ ಸಾಹಿತ್ಯ ಅವಲೋಕನ

೧. ಪೀಠಿಕೆ
೨. ಯೋಜನೆಗಳ ಮತ್ತು ಸಾಹಿತ್ಯದ ಅವಲೋಕನ
೩. ಉಪಸಂಹಾರ

## ೧.ಪೀಠಿಕೆ

ಸಾಹಿತ್ಯ ಗ್ರಂಥಗಳು, ಲೇಖನಗಳು, ಸಂಶೋಧನಾ ಗ್ರಂಥಗಳು, ಕೈಪಿಡಿಗಳು, ಸರ್ಕಾರಿ ಆದೇಶಗಳು, ಗೆಜೆಟಿಯರ್‌ಗಳು, ಶಿಕ್ಷಣ ಇಲಾಖೆಯ ಪತ್ರಿಕೆಗಳು ಪ್ರಸ್ತುತ ಸಂಶೋಧನೆಗೆ ಪರಿಪೂರ್ಣವಾದ ಅಧ್ಯಯನಕ್ಕೆ ಸಹಾಯಕವಾಗಬಲ್ಲವು. ಪ್ರಸ್ತುತ ಸಂಶೋಧನಾ ವಿಷಯವಾದ **ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ: ಒಂದು ಅಧ್ಯಯನ** (ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟ ಹಿಡಕಲ್ಲ ಅನುಲಕ್ಷಿಸಿ) ಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಪರಿಕರಗಳು ನಿರ್ಧಿಷ್ಟವಾಗಿ ಒಂದೇ ಗ್ರಂಥ ಅಥವಾ ಲೇಖನಗಳಲ್ಲಿ ದೊರೆಯುವುದಿಲ್ಲ. ಅವು ವಿವಿಧ ಪುಸ್ತಕಗಳಲ್ಲಿ, ಕೈಪಿಡಿಗಳಲ್ಲಿ ಇತ್ಯಾದಿ ಪರಿಕರಗಳಲ್ಲಿ ಹರಡಿಕೊಂಡಿದೆ.

ಶಾಲಾ ಸುಧಾರಣೆಯ ಪರಿಕಲ್ಪನೆ ಎಂಬುದು, ಅನಾದಿಕಾಲದಿಂದಲೂ ಗುರುಕುಲಗಳಲ್ಲಿ ನಡೆಯುತ್ತಿದ್ದ ಆಗಿನ ಶಿಕ್ಷಣ ಒಂದು ರೀತಿಯದ್ದಾಗಿದ್ದರೆ, ಇಂದಿನ ಶಾಲಾ ಕಟ್ಟಡಗಳಲ್ಲಿ ನಡೆಯುವ ಶಿಕ್ಷಣ ಪದ್ದತಿ ಬೇರೆಯದ್ದಾಗಿದೆ. ಆಗಿನ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ಗುರುಕುಲಗಳಲ್ಲಿ ಪ್ರವೇಶ ಇರಲಿಲ್ಲ ಆದರೆ ಇಂದು ಲಿಂಗತಾರತಮ್ಯವಿಲ್ಲದೆ ಎಲ್ಲರಿಗೂ ಸಮಾನವಾಗಿ ಶಿಕ್ಷಣ ನೀಡಲಾಗುತ್ತಿರುವ ಪರಿಕಲ್ಪನೆ ಎಲ್ಲರನ್ನು ಸಮಾನರನ್ನಾಗಿ ಕಾಣುವುದಾಗಿದೆ.

ದೇಶವು ಅನೇಕ ಪರಕೀಯರ ದಾಳಿಗೆ ತುತ್ತಾಗಿ ಅನಾದಿ ಕಾಲದಿಂದಲೂ ನಡೆದುಕೊಂಡು ಬರುತ್ತಿದ್ದ ಶಿಕ್ಷಣ ಪದ್ದತಿ ಬದಲಾಗುತ್ತಾ ***'ಬಂದವರ'*** ಪ್ರಭಾವಗಳಿಂದ ಬದಲಾಗುತ್ತಾ ಸಾಗಿತು. 'ಹೆಣ್ಣು' ಶಿಕ್ಷಣ ವಂಚಿತಳಾಗುತ್ತಾ ಸಾಗಿದರೆ ಕೆಲವು ವರ್ಗಗಳು ಲಿಂಗ ಬೇಧವಿಲ್ಲದೆ ಅನಕ್ಷರಸ್ಥರಾಗಿ ಉಳಿಯತೊಡಗಿದವು. ಇದಕ್ಕೆ ಪೂರ್ವಾಗ್ರಹಪೀಡಿತ ವರ್ಗಗಳ ದೌರ್ಜನ್ಯ ಕಾರಣವಾಗಿತ್ತು.

ಆದರೆ ಬದಲಾದ ಸನ್ನಿವೇಶದಲ್ಲಿ ಸರ್ವರಿಗೂ ಶಿಕ್ಷಣ ದೊರೆತು ದೇಶದ ಅಭಿವೃದ್ಧಿ ಸದಾ ಪ್ರಗತಿ ಪಥದಲ್ಲಿ ಸಾಗಲಿ ಎಂಬ ಉದ್ದೇಶಹೊಂದಿದೆ. ಅಲ್ಲದೆ ಶಿಕ್ಷಣವು ಮಾನವನ ***ಮೂಲಭೂತ ಹಕ್ಕು*** ಎಂದು ಸಂವಿಧಾನವು ಘೋಷಿಸಿದೆ. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯನಂತರ ಸರ್ಕಾರ ಶಾಲಾ ಸುಧಾರಣೆಗಾಗಿ ಹಮ್ಮಿಕೊಂಡ ಕಾರ್ಯಕ್ರಮ ಮತ್ತು ಯೋಜನೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

## ೨ ಯೋಜನೆಗಳ ಮತ್ತು ಸಾಹಿತ್ಯದ ಅವಲೋಕನ

### ಶಾಲಾ ಶಿಕ್ಷಣ ಸಾರ್ವತ್ರೀಕರಣದ ಹಿನ್ನೆಲೆ

### *೧.ಉಚಿತ ಮತ್ತು ಕಡ್ಡಾಯ ಶಿಕ್ಷಣ– ಸ್ವಾತಂತ್ರ್ಯ ಪೂರ್ವದ ಬೆಳವಣಿಗೆಗಳು*

ಸ್ವಾತಂತ್ರ್ಯ ಪೂರ್ವದಿಂದಲೂ ಭಾರತದಲ್ಲಿ ಶಾಲಾ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಾ ಬಂದಿವೆ. ಅವುಗಳಲ್ಲಿ ಪ್ರಮುಖವಾದವುಗಳು ಇಂತಿವೆ.

- ೧೮೧೩ ರಲ್ಲಿ ಟ್ರಾವನ್‌ಕೋರ್ ಪ್ರಾಂತದ (ಈಗಿನ ಕೇರಳ ರಾಜ್ಯದ ತಿರುವನಂತಪುರ) ಮಹಾರಾಣಿಯವರು ಆಡಳಿತದಲ್ಲಿ ಪ್ರಜೆಗಳು ಸಕ್ರೀಯವಾಗಿ ಪಾಲ್ಗೊಳ್ಳಬೇಕಾದರೆ ಶಿಕ್ಷಣ ಅತ್ಯಾವಶ್ಯಕವೆಂದು ಮನಗಂಡು ತಮ್ಮ ಪ್ರಾಂತ್ಯದ ಎಲ್ಲಾ ಪ್ರಜೆಗಳಿಗೆ ಶಿಕ್ಷಣ ನೀಡುವ ಘೋಷಣೆಯೊಂದನ್ನು ಹೊರಡಿಸಿದರು.

- ೧೮೯೩ರಲ್ಲಿ ಬರೋಡಾದ ಮಹಾರಾಜ ಗಾಯಕವಾಡ್ ರವರು ತಮ್ಮ ರಾಜ್ಯದ ವ್ಯಾಪ್ತಿಗೆ ಒಳಪಡುವ ಸಣ್ಣ ಪ್ರಾಂತ್ಯ ಅಮಾರಾಯಿಲಿಯಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಿದರು. ೧೯೦೬ ರಲ್ಲಿ ಈ ಸೌಲಭ್ಯವನ್ನು ಬರೋಡ ಪ್ರಾಂತ್ಯದ ಉದ್ದಗಲಕ್ಕೂ ವಿಸ್ತರಿಸಿದರು.

- ಕಡ್ಡಾಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಗೋಪಾಲಕೃಷ್ಣ ಗೋಖಲೆಯವರು ೧೯೧೧ ರಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಗೊತ್ತುವಳಿಯೊಂದನ್ನು ಮಂಡಿಸಿ ಶಿಕ್ಷಣದ ಸಾರ್ವತ್ರೀಕರಣಕ್ಕೆ ಸರ್ಕಾರ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದರು.

- ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ಪ್ರಾಂತ್ಯದಲ್ಲಿಯೂ ಇದೇ ರೀತಿಯ ಪ್ರಯತ್ನಗಳು ನಡೆದಿದ್ದವು. ಮೈಸೂರಿನ ಮಹಾರಾಜರು ಶಿಕ್ಷಣದ ಸಾರ್ವತ್ರೀಕರಣಕ್ಕೆ ಇಂತಹುದೆ ಪ್ರಯತ್ನಗಳನ್ನು ನಡೆಸಿದ್ದರು.

- ಮೈಸೂರು ರಾಜ್ಯಕ್ಕೆ ಒಂದು ಶಿಕ್ಷಣ ಯೋಜನೆಯನ್ನು ಅಂದಿನ ನ್ಯಾಯಾಂಗ ಆಯುಕ್ತರು ಸಿದ್ದಪಡಿಸಿ ೧೮೫೭ ರಲ್ಲಿ ಭಾರತ ಸರ್ಕಾರದ ಅನುಮೋದನೆ ಪಡೆದಿದ್ದರು.

- ೧೮೬೬ ರಲ್ಲಿ ಶಿಕ್ಷಣ ಇಲಾಖೆಯನ್ನು ಬೇರ್ಪಡಿಸಿ ಸಾರ್ವಜನಿಕ ಶಿಕ್ಚಣ ಇಲಾಖೆಯ ನಿರ್ದೇಶಕರ ವ್ಯಾಪ್ತಿಗೆ ತರುವುದರ ಮೂಲಕ ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕೆ ಹೊಸ ಚಾಲನೆ ನೀಡಲಾಯಿತು.

- ೧೯೧೧ ರಲ್ಲಿ ಪ್ರಾಥಮಿಕ ಶಿಕ್ಷಣ ಉಚಿತವೆಂದು ಸಾರುವ ಒಂದು ರಾಜಾಜ್ಞೆ, ಯನ್ನು ಹೊರಡಿಸಲಾಯಿತು. ಮುಂದುವರಿದು ೧೯೩೪ ರಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸುವ ಕಾಯಿದೆಯನ್ನು ಜಾರಿಗೊಳಿಸಲಾಯಿತು.

ಒಟ್ಟಾರೆ ಹೇಳಬೇಕೆಂದರೆ ಶಾಲಾ ಶಿಕ್ಷಣದ ಸಾರ್ವತ್ರೀಕರಣ ಬೇಡಿಕೆಯು ಸ್ವಾತಂತ್ರ್ಯ ಚಳುವಳಿಯ ಭಾಗವಾಗಿ ಬೆಳೆದು ಬಂದ ಬೇಡಿಕೆ ಎಂಬುದನ್ನು ನಾವೆಲ್ಲರೂ ಗಮನಿಸಬೇಕು.

*೨.ಉಚಿತ ಮತ್ತು ಕಡ್ಡಾಯ ಶಿಕ್ಷಣ– ಸ್ವಾತಂತ್ರ್ಯ ನಂತರದ ಬೆಳವಣಿಗೆಗಳು*

- ಸ್ವಾತಂತ್ರ್ಯ ನಂತರ ಪ್ರಜಾಪ್ರಭುತ್ವ ವ್ಯವಸ್ಥೆಯ ಬಲವರ್ಧನೆಗೆ ಶಾಲಾ ಶಿಕ್ಷಣದ ಅವಶ್ಯಕತೆ ಮತ್ತು ಮಹತ್ವವನ್ನು ಮನಗಂಡು ಸಂವಿಧಾನದ ರಚನಾಕಾರರು ೧೪ ವರ್ಷ ಒಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವ ಆಶೆಯದೊಂದಿಗೆ ಸಂವಿಧಾನದ ೪ ನೇ ಅಧ್ಯಾಯದ ರಾಜ್ಯ ನಿರ್ದೇಶಕ ತತ್ವಗಳ ಅಡಿಯಲ್ಲಿ ೪೫ ನೇ ವಿಧಿಯನ್ನು ಸೇರಿಸುವುದರ ಮೂಲಕ ಎಲ್ಲಾ ಮಕ್ಕಳಿಗೆ ಸಂವಿಧಾನ ಜಾರಿಯಾದ ೧೦ ವರ್ಷದ ಒಳಗಾಗಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವ ವಾಗ್ದಾನವನ್ನು ಜನತೆಗೆ ನೀಡಿದರು.

- ೧೯೫೦ ರಲ್ಲಿ ಸಂವಿಧಾನವನ್ನು ಅಂಗೀರಿಸಿದ ನಂತರ ೧೪ ವರ್ಷದ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವ ನಿಟ್ಟಿನಲ್ಲಿ ಅನೇಕ ಹೊಸ ಪ್ರಯತ್ನಗಳು ಪಾರಂಭವಾದವು.

- ನಮ್ಮ ಶಿಕ್ಷಣ ಪದ್ದತಿ ಹೇಗಿರಬೇಕು ಮತ್ತು ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿನ ಲೋಪದೋಷಗಳೆನೆಂಬುದನ್ನು ತಿಳಿಯಲು ಶಿಕ್ಷಣ ವ್ಯವಸ್ಥೆಯ ಸಮಗ್ರ ಅಧ್ಯಯನಕ್ಕಾಗಿ ಜುಲೈ ೧೪ – ೧೯೬೪ ರಲ್ಲಿ ಭಾರತ ಸಕಾರವು ಶಿಕ್ಷಣ ಆಯೋಗವನ್ನು ರಚಿಸಿತು.

- ಈ ವರದಿಯನ್ನು ಆಧರಿಸಿ ೧೯೬೮ ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸಿ ಜಾರಿಗೊಳಿಸಲಾಯಿತು. ೧೯೮೬ ರಲ್ಲಿ ೧೯೬೮ರ ಶಿಕ್ಷಣ ನೀತಿಯನ್ನು ಪರಿಷ್ಕರಿಸಿದ ಸರ್ಕಾರ ಕೆಲವು

ಹೊಸ ಆಯಾಮಗಳೊಂದಿಗೆ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸಿತು.

- ೧೯೯೨ರಲ್ಲಿ ಆಚಾರ್ಯ ರಾಮಮೂರ್ತಿಯವರ ನೇತೃತ್ವದಲ್ಲಿ ಪುನರ್ ಪರಿಷ್ಕೃತಗೊಂಡ ಈ ರಾಷ್ಟ್ರೀಯ ಶಿಕ್ಷಣ ನೀತಿಯು ಸಂಸತ್ತಿನ ಅಂಗೀಕಾರನ್ನು ಪಡೆಯಿತು.

- ಸಂವಿಧಾನ ಜಾರಿಯಾದ ೫೭ ವರ್ಷಗಳ ನಂತರವೂ ಈ ಗುರಿ ಮುಟ್ಟದಿರುವುದು ನಮ್ಮೆಲ್ಲರಿಗೆ ಒಂದು ಸವಾಲಾಗಿದೆ. ಎಲ್ಲರಿಗೂ ಶಿಕ್ಷಣ ನೀಡುವ ಮಹತ್ವದ ಯೋಜನೆಗಳಲ್ಲೊಂದಾದ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ (ಡಿ.ಪಿ.ಇ.ಪಿ) ೭ ರಾಜ್ಯ ೪೨ ಜಿಲ್ಲೆಗಳಲ್ಲಿ ೧೯೯೪ ರಿಂದ ಪ್ರಾರಂಭವಾಯಿತು.

- ಈಗ ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿ ರಾಜ್ಯಗಳ ಸಹಭಾಗಿತ್ವದೊಂದಿಗೆ ೨೦೧೦ರ ವೇಳೆಗೆ ೬ ರಿಂದ ೧೪ ವಯೋಮಾನದ ಎಲ್ಲಾ ಮಕ್ಕಳಿಗೂ ೮ ವರ್ಷಗಳ ಗುಣಾತ್ಮಕ ಶಾಲಾ ಶಿಕ್ಷಣವನ್ನು ನೀಡುವ ಬದ್ಧತೆಯನ್ನು ಕೇಂದ್ರ ಸರ್ಕಾರ ನೀಡಿದೆ.

- ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಪ್ರಯತ್ನಗಳು ಜೊತೆ ಜೊತೆಯಾಗಿ ಸಾಗುತ್ತಿದ್ದ ಈ ಸಂದರ್ಭದಲ್ಲಿ ಭಾರತದ ನ್ಯಾಯಾಂಗವು ಶಾಲಾ ಶಿಕ್ಷಣವನ್ನು ಮೂಲಭೂತ ಹಕ್ಕೆಂದು ಘೋಷಿಸುವುದರ ಮೂಲಕ ಈ ಎಲ್ಲಾ ಪ್ರಯತ್ನಗಳಿಗೆ ಒಂದು ಹೊಸ ತಿರುವು ನೀಡಿ ಶಿಕ್ಷಣ ವಂಚಿತ ಮಕ್ಕಳ ಬದುಕಿನಲ್ಲಿ ಒಂದು ಹೊಸ ಆಶಾಭಾವನೆಯನ್ನು ಮೂಡಿಸಿದೆ.

- ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಪ್ರಕಾರ ದೇಶದ ಪ್ರತಿಯೊಬ್ಬ ಪ್ರಜೆಯು ಶಿಕ್ಷಣ ಪಡೆಯುವ ಮೂಲಭೂತ ಹಕ್ಕನ್ನು ಹೊಂದಿರುತ್ತಾನೆ. ಈ ಹಕ್ಕು ಈಗಾಗಲೇ ಇರುವು ಜೀವಿಸುವ ಹಕ್ಕಿನ ಭಾಗವಾಗಿರುತ್ತದೆ ಎಂಬ ಮಹತ್ವದ ತೀರ್ಪನ್ನು ನೀಡಿದೆ.

- ಈ ತೀರ್ಪನ್ನು ಆಧರಿಸಿ ಶಿಕ್ಷಣವನ್ನು ಒಂದು ಮೂಲಭೂತ ಹಕ್ಕನ್ನಾಗಿಸುವ ನಿಟ್ಟಿನಲ್ಲಿ ಸಂವಿಧಾನಕ್ಕೆ ಸೂಕ್ತ ತಿದ್ದುಪಡಿ ಮಾಡಲಾಗಿದೆ. ೮೬ ನೇ ಸಂವಿಧಾನದ ತಿದ್ದುಪಡಿ ಕಾಯ್ದೆಯು ಪರಿಚ್ಛೇದ ೨೧ರ ನಂತರ ೨೧-ಎ ಯನ್ನು ಸೇರಿಸುವುದರ ಮೂಲಕ ಶಾಲಾ ಶಿಕ್ಷಣಕ್ಕೆ ಮೂಲಭೂತ ಹಕ್ಕಿನ ಸ್ಥಾನ ಕಲ್ಪಿಸಿದೆ.

- ಈ ಕಾಯ್ದೆಯಂತೆ ೬ರಿಂದ ೧೪ ವರ್ಷ ಯಸ್ಸಿನ ಮಕ್ಕಳು ಕಡ್ಡಾಯ ಮತ್ತು ಉಚಿತ ಹಾಗೂ ಗುಣಾತ್ಮಕ ಶಿಕ್ಷಣ ಪಡೆಯುವ ಮೂಲಭೂತ ಹಕ್ಕನ್ನು ಹೊಂದಿದ್ದಾರೆ. ಜೊತೆಗೆ ಪರಿಚ್ಛೇದ ೪೫ ರ ಪ್ರಕಾರ ಹುಟ್ಟಿನಿಂದ ೬ ವರ್ಷ ವಯಸ್ಸಿನ ಮಕ್ಕಳ ಬಾಲ್ಯಪೂರ್ವ ಆರೈಕೆ ಮತ್ತು ಶಿಕ್ಷಣ ಪಡೆಯುವ ಅವಕಾಶವನ್ನು ಹೊಂದಿದ್ದಾರೆ.

### *೩.ಉಚಿತ ಮತ್ತು ಕಡ್ಡಾಯ ಶಿಕ್ಷಣ–ಕರ್ನಾಟಕ ರಾಜ್ಯದ ಪ್ರಸ್ತುತ ಕಾರ್ಯಕ್ರಮಗಳು*

ಶಾಲಾ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಪ್ರಕ್ರಿಯೆಗೆ ನಮ್ಮರಾಜ್ಯದಲ್ಲಿಯೂ ಗಂಭೀರ ಪ್ರಯತ್ನಗಳು ನಡೆದಿವೆ.

- ಸಾರ್ವಜನಿಕ ಶಿಕ್ಷಣ ಇಲಾಖೆಯು ಕಳೆದ ಹಲವಾರು ವರ್ಷಗಳಿಂದ ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ಮಕ್ಕಳ ಸಮೀಕ್ಷೆಯನ್ನು ನಡೆಸಿ ಶಾಲೆಯಿಂದ ಹೊರಗುಳಿದಿರುವ ಮಕ್ಕಳನ್ನು ಪನಃ ಶಾಲೆಯ ಮುಖ್ಯವಾಹಿನಿಗೆ ತರಲು ಅನೇಕ ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

- ಅವುಗಳಲ್ಲಿ ಚಿನ್ನರ ಅಂಗಳ, ಬಾ ಮರಳಿ ಶಾಲೆಗೆ, ಕೂಲಿಯಿಂದ ಶಾಲೆಗೆ, ಬಾ ಬಾಲೆ ಶಾಲೆಗೆ, ವಸತಿ ಇದ್ದಲ್ಲಿ ಶಾಲೆ, ಸಂಚಾರಿ ಶಾಲೆ, ಗ್ರಹಾಧಾರಿತ ಶಾಲೆ, ಪರಿಹಾರ ಬೋಧನೆ ಕೆಲವು ಪ್ರಮುಖ ಕಾರ್ಯಕ್ರಮಗಳು.

- ಶಾಲೆಯಿಂದ ಹೊರಗುಳಿದಿರುವ ಮಕ್ಕಳ ಪೈಕಿ ಶೇ.೫೦ ಕ್ಕಿಂತ ಹೆಚ್ಚು ಮಕ್ಕಳು ಉತ್ತರ ಕರ್ನಾಟಕದ ೭ ಜಿಲ್ಲೆಗಳಲ್ಲಿ ಇರುವುದನ್ನು ಮನಗಂಡ ಸರ್ಕಾರವು ಅಲ್ಲಿ ಪ್ರತ್ಯೇಕ ನಿರ್ದೇಶನಾಲಯದ ಮೂಲಕ ವಿಶೇಷ ಕಾರ್ಯಕ್ರಮ ಮತ್ತು ಹೊಸ ಯೋಜನೆಗಳ ಅಡಿಯಲ್ಲಿ ಎಲ್ಲಾ ಮಕ್ಕಳನ್ನು ಪುನಃ ಶಾಲೆಗೆ ತರಲು ಶ್ರಮ ವಹಿಸಿ ಕೆಲಸ ನಿರ್ವಹಿಸುತ್ತಿದೆ.

- ಶಾಲಾ ಶಿಕ್ಷಣದ ಸಾರ್ವತ್ರೀಕರಣಕ್ಕೆ ಸಂಬಂಧಿಸಿದ ಈ ಎಲ್ಲಾ ಕಾರ್ಯಕ್ರಮಗಳು ರಾಜ್ಯದಲ್ಲಿ ಕೇಂದ್ರ ಸರ್ಕಾರವು ಹೊಸದಾಗಿ ಜಾರಿಗೊಳಿಸಿರುವ ಸರ್ವಶಿಕ್ಷಣ ಅಭಿಯಾನ ಯೋಜನೆಯಡಿಯಲ್ಲಿ ನಡೆಯುತ್ತಿವೆ.

- ಜೊತೆಗೆ ಗುಣಾತ್ಮಕ ಶಿಕ್ಷಣವನ್ನು ಮಕ್ಕಳಿಗೆ ನೀಡಲು ರಾಜ್ಯ ಸರ್ಕಾರವು **"ಜೂನ್,೨೦೦೩-೦೪ ನೇಯ ಶೈಕ್ಷಣಿಕ ವರ್ಷವನ್ನು ಕಲಿಕಾ ಸಾಧನ ವರ್ಷ"**ವನ್ನಾಗಿ ಘೋಷಿಸಿ ೨೦ ಅಂಶಗಳ ವಿಶೇಷ ಕಾರ್ಯಕ್ರಮವನ್ನು ಪ್ರಕಟಿಸಿದೆ.

- ಗುಣಮಟ್ಟದ ಶಿಕ್ಷಣವನ್ನು ನೀಡುವ ಮುಂದುವರಿದ ಭಾಗವಾಗಿ ರಾಜ್ಯಸರ್ಕಾರವು ಕರ್ನಾಟಕ ರಾಜ್ಯ ಶಾಲಾ ಗುಣಮಟ್ಟ ಮೌಲ್ಯಾಂಕಣ ಸಂಸ್ಥೆಯನ್ನು ಸ್ಥಾಪಿಸಿದೆ.

- ಈ ಸಂಸ್ಥೆಯು ರಾಜ್ಯಾದ್ಯಾಂತ ೨೦೦೫ – ೦೬ ನೇ ಸಾಲಿನ ವಿದ್ಯಾರ್ಥಿಗಳ ಶೈಕ್ಷಣಿಕ ಗುಣಮಟ್ಟವನ್ನು ತಿಳಿಯಲು ಮೌಲ್ಯಾಂಕಣ ನಡೆಸಿತು. ಮೌಲ್ಯಾಂಕಣದ ಫಲಿತಾಂಶಗಳು ಈಗ ರಾಜ್ಯದ ಎಲ್ಲಾ ಶಾಲೆಗಳನ್ನು ತಲುಪಿವೆ.

ಇಂದು ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳನ್ನು ಸರ್ಕಾರ ತಂದಿದೆ. ಹಲವು ಶೈಕ್ಷಣಿಕ ಯೋಜನೆಗಳನ್ನು ಅನುಷ್ಠಾನಗೊಳಿಸಲು ಶಿಕ್ಷಣದ ಅಭಿವೃದ್ದಿಗೆ ಅವಿರತ ಪ್ರಯತ್ನ ನಡೆಸುತ್ತಿದೆ. ಈ ನಿಟ್ಟಿನಲ್ಲಿ "ಸಾರ್ವತ್ರಿಕ ಶಿಕ್ಷಣ" ಜಾರಿಗೊಳಿಸಿ ೬-೧೪ ವಯಸ್ಸಿನ ಎಲ್ಲಾ ಮಕ್ಕಳನ್ನು ಕಡ್ಡಾಯ ಶಿಕ್ಷಣ ಕೊಡುವ ಪ್ರಯತ್ನ ನಡೆಯುತ್ತಿದೆ. "ಕೂಲಿಯಿಂದ ಶಾಲೆಗೆ", "ಸರ್ವಶಿಕ್ಷಣ ಅಭಿಯಾನ", "ಚಿನ್ನರ ಅಂಗಳ", "ಬಾ ಮರಳಿ ಶಾಲೆಗೆ", ಹೀಗೆ ಹಲವಾರು ಜನಾಂದೋಲನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ೨೦೧೦ ರ ವೇಳೆಗೆ ೧೪ ವರ್ಷದ ಎಲ್ಲಾ ಮಕ್ಕಳು ೮ ವರ್ಷದ ಶಾಲಾ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸುವ ಬೃಹತ್ ಯೋಜನೆಗಳನ್ನು ಹಾಕಿಕೊಂಡಿದೆ. ಇದರ ಪರಿಣಾಮವಾಗಿ ಶಾಲಾ ಅಭಿವೃದ್ಧಿ ಕಾರ್ಯಗಳ ಮೇಲುಸ್ತುವಾರಿಗಾಗಿ ಶಾಲಾ ಅಭಿವೃದ್ದಿ ಹಾಗೂ ಮೇಲುಸ್ತುವಾರಿ ಸಮಿತಿ (School Development and Management Committee) (SDMC) ಗಳ ರಚನೆಗಳಾದವು ಎಸ್.ಡಿ.ಎಮ್.ಸಿ. ರಚನೆಗೆ ಒತ್ತು ನೀಡಿದ ರಾಜಾರಾಮಣ್ಣ ಅವರ ನೇತೃತ್ವದ ಶಿಕ್ಷಣ ಕಾರ್ಯ ತಂಡವು ಹಿಂದಿದ್ದ ಶಾಲಾ ಸಮಿತಿಗಳನ್ನು ರದ್ದುಪಡಿಸಿ ಶಾಲಾ ಮಟ್ಟದಲ್ಲಿ ಸಮುದಾಯ, ಪೋಷಕ ಮತ್ತು ಶಿಕ್ಷಕರನ್ನೊಳಗೊಂಡ ಸಮಿತಿಗಳ ರಚನೆಗೆ ಶಿಫಾರಸ್ಸು ಮಾಡಿತು. ಇದರ ಶಿಫಾರಸ್ಸಿನ ಆಧಾರದ ಮೇಲೆ ಕರ್ನಾಟಕ ಸರ್ಕಾರವು ತನ್ನ ನಡುವಳಿಕೆ ಪತ್ರ ಸಂಖ್ಯೆ(ಅ.ಸಂ) ಆ.ಶಾ.ಕ.ಶಿ.ಕಾ.ತಿ ೧-೨೦೦೦-೦೧ ದಿನಾಂಕ: ೩೦/೦೩/೨೦೦೧ ರಲ್ಲಿ ಶಾಲಾ ಅಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಗಳ ರಚನೆಗೆ ಅನುಮೋದನೆ ಮಾಡಿತು.

ಡಾ.ರಾಜಾರಾಮಣ್ಣನವರ ಅಧ್ಯಕ್ಷತೆಯಲ್ಲಿ ನಡೆಸಿದ ಕಾರ್ಯತಂಡದ ಮಧ್ಯಂತರ ವರದಿಯ ಶಿಫಾರಸ್ಸಿನಂತೆ ಕರ್ನಾಟಕ ರಾಜ್ಯ ಶಿಕ್ಷಣ ಕ್ಷೇತ್ರದಲ್ಲಿ ಗುಣಾತ್ಮಕತೆಯನ್ನು ತರುವ ಸಲುವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆ

ಆಯುಕ್ತರು ತಮ್ಮ ಪ್ರಸ್ತಾವಣೆಯಲ್ಲಿ ಕೆಳಕಂಡ ಅಂಶಗಳನ್ನು ಆಧರಿಸಿ ಶಿಕ್ಷಣ ಕಾಯ್ದೆಯ ತಿದ್ದುಪಡಿಯನ್ನು ಸೂಚಿಸಿದರು.

- ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣವನ್ನು ಸಾಧಿಸಲು.
- ಶಾಲೆಗಳು ಪರಿಣಾಮಕಾರಿಯಾಗಿ ಕೆಲಸ ಮಾಡುವುದನ್ನು ಖಚಿತಪಡಿಸಿಕೊಳ್ಳಲು.
- ಶಿಕ್ಷಣ ವ್ಯವಸ್ಥೆಯನ್ನು ವಿಕೇಂದ್ರಿಕರಿಸಿ ಶಾಲಾ ಆಡಳಿತವನ್ನು ಸುಧಾರಿಸಲು.
- ಶಿಕ್ಷಕರನ್ನು ಪ್ರೇರೇಪಿಸಿ ಅವರ ಜವಾಬ್ದಾರಿಗಳನ್ನು ಹೆಚ್ಚಿಸಲು.
- ಗ್ರಾಮ ಶಿಕ್ಷಣ ಸಮಿತಿಯ ಲೋಪ ದೋಷಗಳನ್ನು ಹೋಗಲಾಡಿಸಲು.
- ದಾಖಲಾತಿ, ಹಾಜರಾತಿ, ಶಿಕ್ಷಣದ ಗುಣಮಟ್ಟ ಸುಧಾರಣೆ ಕುರಿತಂತೆ ಇರುವ ಸಮಸ್ಯೆಗಳನ್ನು ಪರಿಹರಿಸಲು.
- ಸಂಪನ್ಮೂಲಗಳನ್ನು ಕ್ರೂಢಕರಿಸಲು.
- ಸಮುದಾಯದ ಸಹಭಾಗಿತ್ವ ಪಡೆಯಲು.

ಈ ನಿಟ್ಟಿನಲ್ಲಿ ಅಲ್ಲಿಯವರೆಗೆ ಅಸ್ತಿತ್ವವಿದ್ದ ಶಾಲಾ ಅಭಿವೃದ್ದಿ ಸಮಿತಿ (School Betterment Committee) ಮತ್ತು ಗ್ರಾಮ ಶಿಕ್ಷಣ (Village Education Committee) ಸಮಿತಿಗಳನ್ನು ರದ್ದು ಪಡಿಸಿ ಶಾಲಾ ಮಟ್ಟದಲ್ಲಿ ಎಸ್.ಡಿ.ಎಮ್.ಸಿ. ಗಳನ್ನು ರಚಿಸಲು ಸ.ಆ.ಸ.ಇಆ/೧/P.B.S.೨೦೦೧, ಬೆಂಗಳೂರು ದಿನಾಂಕ: ೨೭/೦೪/೨೦೦೧ ರ ಸರ್ಕಾರ ಆದೇಶ ಪತ್ರದಲ್ಲಿ ಸೂಚಿಸಿದೆ.

*೪.ಎಸ್.ಡಿ.ಎಮ್.ಸಿ. ನಡೆದು ಬಂದ ದಾರಿ*

ಶಿಕ್ಷಣದ ಸಾರ್ವತ್ರೀಕರಣಕ್ಕೆ ಸಂಬಂಧಿಸಿದಂತೆ ಹಲವಾರು ಸವಾಲುಗಳು ನಮ್ಮ ಮುಂದಿವೆ. ರಾಜ್ಯ ಸರ್ಕಾರವು ಶಾಲಾ ಶಿಕ್ಷಣದ ಸಾರ್ವತ್ರೀಕರಣದಲ್ಲಿ ಸಮುದಾಯವನ್ನು ತೊಡಗಿಸಿಕೊಳ್ಳುವ ಹಲವಾರು ಪ್ರಯತ್ನಗಳನ್ನು ಮಾಡುತ್ತಾ ಬಂದಿದೆ.

- ಸಮುದಾಯ ವನ್ನು ಶಿಕ್ಷಣದ ಸಾರ್ವತ್ರೀಕರಣದಲ್ಲಿ ತೊಡಗಿಸಿಕೊಳ್ಳುವ ಮೊದಲ ಪ್ರಯತ್ನವಾಗಿ ದಿನಾಂಕ: ೨೭/೦೨/೧೯೮೮ ರಲ್ಲಿ ಸಕಾರವು ಆದೇಶವೊಂದನ್ನು ಹೊರಡಿಸಿತು.

- ಈ ಆದೇಶದ ಅನ್ವಯ ರಾಜ್ಯದಲ್ಲಿ ಅಂದು ಜಾರಿಯಲ್ಲಿದ್ದ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳನ್ನು ಮತ್ತು ಕೇಂದ್ರ ಸರ್ಕಾರದ ಹೊಸ ಶಿಕ್ಷಣ ನೀತಿಯನ್ನು ಗಮನದಲ್ಲಿಟ್ಟುಕೊಂಡು ಪ್ರಾಥಮಿಕ ಶಾಲೆಗಳಲ್ಲಿ ಹಿಂದೆ ಅಸ್ಥಿತ್ವದಲ್ಲಿದ್ದ "ಶಾಲಾಭಿವೃದ್ಧಿ ಸಮಿತಿ" ಗಳನ್ನು "ಶೈಕ್ಷಣಿಕ ಸಮಿತಿ"ಗಳೆಂದು ಪುನರ್ ನಾಮಕರಣ ಮಾಡುವ ತೀರ್ಮಾಣ ಕೈಗೊಳ್ಳಲಾಯಿತು.

- ಈ ಸಮಿತಿಯಲ್ಲಿ ಕೇವಲ ಜನ ಪ್ರತಿನಿಧಿಗಳು ಮತ್ತು ಊರಿನ ಗಣ್ಯ ವ್ಯಕ್ತಿಗಳಿಗೆ ಮಾತ್ರ ಅವಕಾಶ ಕಲ್ಪಿಸಲಾಗಿತ್ತು.

- ಇದಾದ ನಂತರ ಜುಲೈ, ೧೯೯೫ ರಲ್ಲಿ ಪ್ರಾಥಮಿಕ ಶಿಕ್ಷಣದ ನಿರ್ದೇಶಕರು ರಾಜ್ಯದ ಎಲ್ಲಾ ಉಪನಿರ್ದೇಶಕರಿಗೆ ಬರೆದ ಪತ್ರದಲ್ಲಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ೯ ರಿಂದ ೧೧ ಜನರನ್ನೊಳಗೊಂಡ "ಶಾಲಾಭಿವೃದ್ಧಿ ಸಮಿತಿ" ರಚಿಸುವಂತೆ ಸೂಚನೆ ನೀಡಿದ್ದರು. ಈ ಪತ್ರದನ್ವಯ ಸಮಿತಿಯಲ್ಲಿ ಮೊದಲಬಾರಿಗೆ ಒಬ್ಬ ಪೋಷಕ ಪ್ರತಿನಿಧಿಗೆ ಅವಕಾಶ ಕಲ್ಪಿಸಲಾಗಿತ್ತು.

- ಅಗಷ್ಟ ೧೯೯೫ ರಲ್ಲಿ ಪ್ರತಿಯೊಂದು ಗ್ರಾಮದಲ್ಲಿ ಶೈಕ್ಷಣಿಕ ಚಟುವಟಿಕೆಗಳ ಉಸ್ತುವಾರಿ ನೋಡಿಕೊಳ್ಳಲು ಗ್ರಾಮ ಶಿಕ್ಷಣ ಸಮಿತಿಗಳನ್ನು ರಚಿಸುವಂತೆ ಸರ್ಕಾರ ಆದೇಶಿಸಿತು. ಈ ಸಮಿತಿಯಲ್ಲಿ ಕನಿಷ್ಠ ೭ ರಿಂದ ಗರಿಷ್ಠ ೧೫ರ ಸದಸ್ಯರಿದ್ದು, ಪೋಷಕ ಪ್ರತಿನಿಧಿಯೊಬ್ಬರಿಗೆ ಅವಕಾಶ ಕಲ್ಪಿಸಲಾಗಿತ್ತು.

- ಒಟ್ಟಾರೆ ಸರ್ವ ಶಿಕ್ಷಣ ಅಭಿಯಾನದ ಪೂರ್ವದಲ್ಲಿದ್ದ ಶಾಲಾ ಅಭಿವೃದ್ಧಿ/ ಶಿಕ್ಷಣ ಸಮಿತಿ/ ಗ್ರಾಮ ಶಿಕ್ಷಣ ಸಮಿತಿಗಳ ಮೂಲಕ ಶಾಲಾ ಶಿಕ್ಷಣದಲ್ಲಿ ಸಮುದಾಯವನ್ನು ತೊಡಗಿಸಿಕೊಳ್ಳಲು ಹಲವು ಪ್ರತ್ನಗಳಾಗಿದ್ದು, ಇವುಗಳಲ್ಲಿ ಜನಪ್ರತಿನಿಧಿ ಮತ್ತು ಊರಿನ ಗಣ್ಯ ವ್ಯಕ್ತಿಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು.

- ಈ ಮಧ್ಯೆ ೧೯೯೯ ರಲ್ಲಿ ರಚನೆಯಾದ ಶಿಕ್ಷಣ ಕಾರ್ಯಪಡೆಯ ವರದಿಯ ಶಿಫಾರಸ್ಸಿನಂತೆ ರಾಜ್ಯಸರ್ಕಾರವು ೨೦೦೧ ರಲ್ಲಿ ರಾಜ್ಯದ ಎಲ್ಲಾ ಕಿರಿಯ ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಗ್ರಾಮ ಶಿಕ್ಷಣ ಸಮಿತಿ ಮತ್ತು ಶಾಲಾ ಅಭಿವೃದ್ಧಿ ಸಮಿತಿಗಳ ಬದಲಾಗಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳನ್ನು ರಚಿಸುವಂತೆ ಆದೇಶ ನೀಡಿತು.

- ಈ ಆದೇಶದನ್ವಯ ಪ್ರತಿಯೊಂದು ಶಾಲೆಯಲ್ಲಿ ಕಲಿಯುತ್ತಿರುವ ಮಕ್ಕಳ ತಂದೆ ತಾಯಂದಿರ ಆ ಶಾಲೆಯ ಪಾಲಕರ ಪರಿಷತ್ತಿನ ಸದಸ್ಯರಾಗಿರುತ್ತಾರೆ. ಪಾಲಕರ ಪರಿಷತ್ತು ೯ ಜನ ಪಾಲಕ ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತದೆ. ಈ ೯ ಜನರು ಸೇರಿ ಒಬ್ಬ ಅಧ್ಯಕ್ಷನನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಉಳಿದಂತೆ ಈ ಸಮಿತಿಯಲ್ಲಿ ಪದನಿಮಿತ್ತ ಮತ್ತು ನಾಮನಿರ್ದೇಶಿ ಸದಸ್ಯರು ಇರುತ್ತಾರೆ.

- ಈ ಸರ್ಕಾರಿ ಆದೇಶವು ರಾಜ್ಯಾದ್ಯಾಂತ ಹೆಚ್ಚು ಉತ್ಸಾಹ ಮತ್ತು ಪರಿಣಾಮಕಾರಿಯಾಗಿ ಜಾರಿಗೊಂಡ ಕಾರಣ ಎಲ್ಲಾ ಶಾಲೆಗಳಲ್ಲಿ ಎಸ್.ಡಿ.ಎಮ್.ಸಿ. ಗಳು ರಚನೆಗೊಂಡವು.

- ೨೦೦೧ ಅಗಷ್ಟ ಅಂತ್ಯಕ್ಕೆ ಶೇ.೭೦ ರಿಂದ ೮೦ ಶಾಲೆಗಳಲ್ಲಿ ಎಸ್.ಡಿ.ಎಮ್.ಸಿ. ಗಳು ರಚನೆಗೊಂಡು ಕೆಲಸ ನಿರ್ವಹಿಸಲು ಪ್ರಾರಂಭಿಸಿದವು.

- ಎಸ್.ಡಿ.ಎಮ್.ಸಿ. ಗಳು ಮೂರು ವರ್ಷಗಳನ್ನು ಪೂರೈಸಿದ ಹಿನ್ನೆಲೆಯಲ್ಲಿ ಅವುಗಳ ಕಾರ್ಯಕ್ಷಮತೆಯನ್ನು ಇಲಾಖೆಯು ಮೌಲ್ಯ ಮಾಪನ ಮಾಡಿಸಿತು. ಎಸ್.ಡಿ.ಎಮ್.ಸಿ.ಯ ಕಾರ್ಯಕ್ಷಮತೆಯನ್ನು ಸಮಗ್ರವಾಗಿ ಅಧ್ಯನಮಾಡಿದ ತಂಡವು ಈ ಮುಂದಿನ ಪ್ರಮುಖ ಶಿಫಾರಸ್ಸುಗಳನ್ನು ಮಾಡಿತು.

*ಎ) ಎಸ್.ಡಿ.ಎಮ್.ಸಿ. ಗಳ ರಚನೆ ಮತ್ತು ಸ್ವರೂಪ*

೧. ಎಲ್ಲಾ ಮಕ್ಕಳಿಗೆ ಗುಣಾತ್ಮಕ ಶಿಕ್ಷಣವನ್ನು ಖಾತರಿಪಡಿಸಲು ಅಗತ್ಯವಾದ ಆಡಳಿತ ಮತ್ತು ಮೇಲುಸ್ತುವಾರಿ ನಿರ್ವಹಿಸಲು ಶಾಲಾ ಹಂತದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ವಿಕೇಂದ್ರೀಕರಣದ ಮೂಲ ಘಟಕವಾದ ಎಸ್.ಡಿ.ಎಮ್.ಸಿ. ಗಳನ್ನು ಮುದುವರಿಸುವುದು.

೨. ಎಸ್.ಡಿ.ಎಮ್.ಸಿ. ಗಳ ರಚನೆ ಮತ್ತು ದೈನಂದಿನ ಕಾರ್ಯನಿರ್ವಹಣೆಗೆ ಅಡ್ಡಿಯನುಂಟು ಮಾಡುವ ರಾಜಕೀಯ ಹಸ್ತಕ್ಷೇಪವನ್ನು ತಡೆಗಟ್ಟಿ ಎಸ್.ಡಿ.ಎಮ್.ಸಿ.ಗಳ ಸ್ವಾಯತ್ತತೆಯನ್ನು ಕಾಪಾಡುವುದು ಇಂದಿನ ತುರ್ತು ಅಗತ್ಯವಾಗಿದೆ. ಈ ಮೂಲಕ ಎಸ್.ಡಿ.ಎಮ್.ಸಿ.ಗಳ ಕಾರ್ಯ ನಿರ್ವಹಣೆಯಲ್ಲಿ ಪಾರದರ್ಶಕತೆ ಮತ್ತು ಪ್ರಜಾಸತಾತ್ಮಕ ಕಾರ್ಯನಿರ್ವಹಣೆಯನ್ನು ಖಾತರಿಪಡಿಸಿಕೊಳ್ಳಬೇಕಾಗಿದೆ.

೩. ಎಸ್.ಡಿ.ಎಮ್.ಸಿ.ಗಳ ರಚನೆಯಲ್ಲಿ ಉಂಟಾಗಿರುವ ಗೊಂದಲ ಮತ್ತು ದ್ವಂದ್ವಗಳನ್ನು ನಿವಾರಿಸುವ ಸಲುವಾಗಿ ಎಸ್.ಡಿ.ಎಮ್.ಸಿ.ಗೆ ಸಂಬಂದಿಸಿದಂತೆ ದಿನಾಂಕ: ೨೮/೦೪/೨೦೦೧ ಪ್ರಥಮ ಸುತ್ತೋಲೆಯಲ್ಲಿರುವ ವಿಷಯಕ್ಕೆ ಧಕ್ಕೆಯಾಗದಂತೆ ಮಾರ್ಪಾಡುಗೊಳಿಸಿದ (Modified) ಸುತ್ತೋಲೆಯನ್ನು ನೀಡುವುದು/ಜಾರಿಗೊಳಿಸುವುದು.

೪. ಎಸ್.ಡಿ.ಎಮ್.ಸಿ.ಗೆ ಸಂಬಂಧಿಸಿದಂತೆ ಸರ್ಕಾರ ಜಾರಿಗೊಳಿಸಿರುವ ೨೮/೦೪/೨೦೦೧ ರ ಪ್ರಥಮ ಸುತ್ತೋಲೆಯ ನಂತರದ ಎಲ್ಲಾ ಸತ್ತೋಲೆಗಳು ಪ್ರಜಾಪ್ರಭುತ್ವ ಕಾರ್ಯ ವಿಧಾನಕ್ಕೆ ಧಕ್ಕೆಯನ್ನುಂಟುಮಾಡುತ್ತದೆ. ಆದ್ದರಿಂದ ಸರ್ಕಾರವು ಮೊದಲ ಸತ್ತೋಲೆಯ ನಂತರ ನೀಡಿರುವ ಎಸ್.ಡಿ.ಎಮ್.ಸಿ.ಗೆ ಸಂಬಂಧಿಸಿದ ಇತರ ಎಲ್ಲಾ ಸುತ್ತೋಲೆಗಳನ್ನು ಹಿಂತೆಗೆದುಕೊಳ್ಳುವಂತೆ ಅಧ್ಯಯನವು ಶಿಫಾರಸ್ಸು ಮಾಡಿತು.

*ಬಿ) ಪಂಚಾಯತ್ ರಾಜ್ ಸಂಸ್ಥೆಗಳೊಂದಿಗೆ ಸಂಬಂಧ*

೧. ಗ್ರಾಮ ಸಭೆಗಳಲ್ಲಿ ಆಯಾ ಗ್ರಾಮದ ಶಾಲೆಗಳ ಎಸ್.ಡಿ.ಎಮ್.ಸಿ.ಯ ಅಧ್ಯಕ್ಷರು, ಉಪಾಧ್ಯಕ್ಷರುಗಳು ಖಾಯಂ ಆಮಂತ್ರಿತ ಸದಸ್ಯರಾಗಿರುತ್ತಾರೆ. ಸಭೆಗಳಲ್ಲಿ ಶೈಕ್ಷಣಿಕ ಸಮಸ್ಯೆ ಹಾಗೂ ಪ್ರಗತಿಯ ಕುರಿತು ಚರ್ಚಿಸಲು ಅವರುಗಳಿಗೆ ಸೂಕ್ತ ಕಾಲಾವಕಾಶ ನೀಡಬೇಕು.

೨. ಗ್ರಾಮ ಪಂಚಾಯಿತಿಯ ಕೇಂದ್ರದಲ್ಲಿರುವ ಶಾಲೆಯ ಎಸ್.ಡಿ.ಎಮ್.ಸಿ.ಯ ಅಧ್ಯಕ್ಷರು ಅಥವಾ ಉಪಾಧ್ಯಕ್ಷರುಗಳು, ಆಗ್ರಾಮ ಪಂಚಾಯಿತಿ ಸಭೆಗೆ ವಿಶೇಷ ಆಹ್ವಾನಿತರಾಗಿರುತ್ತಾರೆ. ಈ ಕ್ರಮವು ಶಾಲೆ ಹಾಗೂ ಶೈಕ್ಷಣಿಕ ವಿಚಾರಗಳನ್ನು ಗ್ರಾಮಪಂಚಾಯಿತಿ ಹಂತದಲ್ಲಿ ಮಂಡಿಸಲು ಸೂಕ್ತ ಅವಕಾಶವನ್ನು ಕಲ್ಪಿಸುತ್ತದೆ. ಉಳಿದ ಶಾಲೆಗಳ ಎಸ್.ಡಿ.ಎಮ್.ಸಿ. ಅಧ್ಯಕ್ಷರು ತಮ್ಮ ಶಾಲೆಗಳ ಸಮಸ್ಯೆಗಳನ್ನು ಮೇಲ್ಕಾಣಿಸಿದ ಅಧ್ಯಕ್ಷರ/ಉಪಾಧ್ಯಕ್ಷರ ಮುಖಾಂತರ ಗ್ರಾಮಪಂಚಾಯಿತಿಯ ಗಮನಕ್ಕೆ ತರಬಹುದಾಗಿದೆ.

೩. ಸಾರ್ವಜನಿಕ ಶಿಕ್ಷಣ ಇಲಾಖೆ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಇಲಾಖೆಗಳು ಸೇರಿ ಗ್ರಾಮ ಪಂಚಾಯತಿ ಸದಸ್ಯರೊಳಗೆ ಎಸ್.ಡಿ.ಎಮ್.ಸಿ. ಗಳಲ್ಲಿ ಅವರ ಪಾತ್ರದ ಬಗ್ಗೆ ತಿಳುವಳಿಗೆ ನೀಡುವುದು.

- ಈ ಮಧ್ಯ ಪಂಚಾಯತ್‌ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಇಲಾಖೆಯು ದಿನಾಂಕ: ೦೬/೦೫/೨೦೦೪ ರಲ್ಲಿ ಸುತ್ತೋಲೆಯೊಂದನ್ನು ಹೊರಡಿಸಿ ಪಂಚಾಯಿತಿಗಳು ತಮ್ಮ

ಕೆಲಸಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅಗತ್ಯವಾದ ಸಮಿತಿಗಳನ್ನು ರಚಿಸಿಕೊಳ್ಳುವ ವಿಧಾನದ ಬಗ್ಗೆ ತಿಳಿಸಿತು.

೧. ಇಲ್ಲಿಯವರೆಗೆ ಸಮಾಂತರವಾಗಿ ಕೆಲಸ ನಿರ್ವಹಿಸುತ್ತಿದ್ದ ಹಲವಾರು ಸಮಿತಿಗಳನ್ನು ಪಂಚಾಯಿತಿಯ ಜೊತೆ ಬೆಸೆಯುವ ಕೆಲಸ ಪ್ರಾರಂಭವಾಯಿತು.

೨. ಈ ಪ್ರಕ್ರೀಯೆಯಲ್ಲಿ ಮಹತ್ವದ ಘಟ್ಟವೆಂದರೆ ಪಂಚಾಯತ್‌ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಸಚಿವಾಲಯವು ಕರ್ನಾಟಕ ರಾಜ್ ಪತ್ರದಲ್ಲಿ ಅಧಿಸೂಚನೆಯ ಮೂಲಕ ಪಂಚಾಯತ್‌ರಾಜ್‌ಗಳಿಗೆ ವಹಿಸಿರುವ ಎಲ್ಲಾ ೨೯ ವಿಷಯಕ್ಕೆ ಸಂಬಂಧಿಸಿದ ವಿವಿಧ ಇಲಾಖಾ ಕಾರ್ಯಕ್ರಮಗಳನ್ನು ಸಂಬಂಧಪಟ್ಟ ಪಂಚಾಯತ್‌ರಾಜ್ಯ ಸಂಸ್ಥೆಗಳಿಗೆ ಅಂದರೆ ಗ್ರಾಮಪಂಚಾಯಿತಿ, ತಾಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ವರ್ಗಾಯಿಸುವ ತಿರ್ಮಾಣ ಕೈಗೊಂಡಿತು.

- ಈ ಮಾದರಿ ಉಪವಿಧಿಗಳನ್ನು ಕರ್ನಾಟಕ ರಾಜ್ಯ ಸರ್ಕಾರವು ಮೊದಲಬಾರಿಗೆ ೧೭/೦೩/೨೦೦೬ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಕೃತವಾಗಿ ಪ್ರಕಟಿಸಿ ಸಾರ್ವಜನಿಕರ ಚರ್ಚೆ ಸಲಹೆಗಳಿಗಾಗಿ ತೆರೆದಿಟ್ಟು ಒಂದು ತಿಂಗಳ ಕಾಲಾವಕಾಶಗಳನ್ನು ಕಲ್ಪಿಸಿತು.

- ಸಾರ್ವಜನಿಕರಿಂದ ಬಂದ ಸಲಹೆ ಸೂಚನೆಗಳ ಮೇಲೆ ಅಗತ್ಯ ತಿದ್ದುಪಡಿಗಳನ್ನು ಮಾಡಿದ ಸರ್ಕಾರವು ಅಂತಿಮವಾಗಿ ಈ ಉಪವಿಧಿಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ:೧೪/೦೬/೨೦೦೬ ರಂದು ಪ್ರಕಟಿಸಿತು. ಇದು ಕರ್ನಾಟಕ ರಾಜ್ಯದ ಶೈಕ್ಷಣಿಕ ಇತಿಹಾಸದಲ್ಲಿ ಒಂದು ಹೊಸ ಮೈಲಿಗಲ್ಲು ಎಂದರೆ ತಪ್ಪಾಗಲಾರದು.

ಈ ರಿತಿ ಭಾಗವಹಿಸುವಾತ್ಮಕ ಸಂಶೋಧನೆಯ ಮೂಲಕ ರೂಪಗೊಂಡ ಮಾದರಿ ಉಪವಿಧಿಗಳ ಪ್ರತಿ ಇಂದು ನಿಮ್ಮ ಕೈಯಲ್ಲಿದೆ. ಈ ಉಪವಿಧಿಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದರ ಮೂಲಕ ಸಮುದಾಯವನ್ನು ಶಿಕ್ಷಣ ಪ್ರಕ್ರಿಯೆಯಲ್ಲಿ ಸಕ್ರೀಯವಾಗಿ ತೊಡಗಿಸಿಕೊಂಡು ಸಾರ್ವತ್ರೀಕರಣಕ್ಕೆ ಗುಣಾತ್ಮಕತೆಯ ಕಾಯಕಲ್ಪವನ್ನು ಕಲ್ಪಿಸಬೇಕಿದೆ.

*ಪಂಚಾಯತ್ ಮತ್ತು ಸಿ.ಎ.ಸಿ. ನಡುವಿನ ಸಂಬಂಧ*

ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಹೆಚ್ಚು ಹೆಚ್ಚು ಪರಿಣಾಮಕಾರಿಯಾಗಿ ಪಾಲ್ಗೊಳ್ಳುವಂತೆ ಮತ್ತು ಅಧಿಕಾರದ ವಿಕೇಂದ್ರಿಕರಣದ ಮೂಲಕ ಅಭಿವೃದ್ಧಿ ವಿಚಾರಗಳನ್ನು ಜನರು ಭಾಗಹಿಸುವ ಮೂಲಕ ತೀರ್ಮಾನಿಸಲು ಅನುಕೂಲವಾಗುವಂತೆ ಸಂವಿಧಾನದ ೭೩ ನೇ

ತಿದ್ದುಪಡಿಗನುಸಾರವಾಗಿ ನಮ್ಮ ರಾಜ್ಯದಲ್ಲಿ ಗ್ರಾಮ, ತಾಲ್ಲೂಕು,ಜಿಲ್ಲಾ ಮಟ್ಟಗಳಲ್ಲಿ ಚುನಾಯಿತ ರಾಜ್ಯ ಅಧಿನಿಯಮ ೧೯೯೩ರ ಪ್ರಕಾರ ಶಿಕ್ಷಣವನ್ನು ಒಳಗೊಂಡಂತೆ ಹಲವು ಅಭಿವೃದ್ಧಿ ಕಾರ್ಯಕ್ರಮಗಳ ಹೊಣೆಯನ್ನು ಪಂಚಾಯಿತಿಗೆ ವಹಿಸಲಾಗಿದೆ.

***ನಾಗರಿಕ ಸೌಕರ್ಯ ಸಮಿತಿ***

ಶಿಕ್ಷಣ ಸಾರ್ವಜನಿಕ ಆರೋಗ್ಯ ಲೋಕೋಪಯೋಗಿ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ಮತ್ತು ಗ್ರಾಮ ಪಂಚಾಯಿತಿ ಇತರೆ ಕಾರ್ಯಗಳನ್ನು ನಿರ್ವಹಿಸಲು.

ಎಸ್.ಡಿ.ಎಮ್.ಸಿ.ಯ ಪದವಿಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಪಂಚಾಯಿತಿ ವ್ಯಾಪ್ತಿಯಲ್ಲಿನ ಪ್ರಾಥಮಿಕ ಮತ್ತು ಸೆಕೆಂಡರಿ ಶಿಕ್ಷಣದ ಜವಾಬ್ದಾರಿ ಸೌಕರ್ಯ ಸ್ಥಾಯಿ ಸಮಿತಿಯ ಜವಾಬ್ದಾರಿ ಯಾಗಿರುವುದರಿಂದ ಸೌಕರ್ಯ ಸ್ಥಾಯಿ ಸಮಿತಿಯ ಅಡಿಯಲ್ಲಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳನ್ನು ರಚಿಸುವುದರ ಮೂಲಕ ಎಸ್.ಡಿ.ಎಮ್.ಸಿ. ಗಳಿಗೆ ಶಾಸನ ಬದ್ದ ಸ್ಥಾನ ಮಾನಗಳನ್ನು ಕಲ್ಪಿಸಲಾಗಿದೆ.

***ಸಿ.ಎ.ಸಿ. ಮತ್ತು ಎಸ್.ಡಿ.ಎಮ್.ಸಿ.***

ಈ ಹಿಂದೆ ತಿಳಿಸಿದಂತೆ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯು ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ ೧೯೯೩ ಅಡಿಯಲ್ಲಿ ಒಂದು ಶಾಸನ ಬದ್ದ ಸಮಿತಿಯಾಗಿದ್ದು ಸೌಕರ್ಯಗಳ ಸಮಿತಿಗಳಡಿಯಲ್ಲಿ ಕೆಲಸ ನಿರ್ವಹಿಸಲು ಅನುಕೂಲವಾಗುವಂತೆ ಮಾದರಿ ಉಪವಿಧಿಗಳನ್ನು ರಚಿಸಲಾಗಿದ್ದು, ಕರ್ನಾಟಕ ಸರ್ಕಾರವು ತನ್ನ ಅಧಿಕೃತ ರಾಜ್ಯ ಪತ್ರದಲ್ಲಿ ದಿನಾಂಕ: ೧೪/೦೬/೨೦೦೬ ರಂದು ಅಧಿಸೂಚನೆ ಹೊರಡಿಸುವುದರ ಮೂಲಕ ರಾಜ್ಯದ ಎಲ್ಲಾ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳನ್ನು ರಚಿಸುವಂತೆ ಆದೇಶಿಸಿದೆ. ಇದರಿಂದಾಗಿ ಎಸ್.ಡಿ.ಎಮ್.ಸಿ. ಗಳು ಪಂಚಾಯತ್‌ರಾಜ್ ವ್ಯವಸ್ಥೆಯ ಭಾಗವಾಗಿದ್ದು ವಿಕೇಂದ್ರಿಕರಣ ಪ್ರಕ್ರಿಯೆಯಲ್ಲಿ ಹೊಸ ಇತಿಹಾಸವನ್ನು ಸೃಷ್ಟಿಸಿದೆ.

- ಈ ಪ್ರಯತ್ನ ವಿಕೇಂದ್ರಿಕರಣದ ಮತ್ತೊಂದು ಪ್ರಮುಖ ಹೆಜ್ಜೆಯಾಗಿದ್ದು, ಈವರೆಗೆ ಪಂಚಾಯಿತಿಗಳಿಗೆ ಸಮಾನಾಂತರವಾಗಿ ಕೆಲಸ ನಿರ್ವಹಿಸುತ್ತಿದ್ದ ಸಂಸ್ಥೆಗಳನ್ನು ಪಂಚಾಯತಿಯಡಿಯಲ್ಲಿ ಒಗ್ಗೂಡಿಸುವುದರ ಮೂಲಕ ಪಂಚಾಯತ್‌ರಾಜ್ ವ್ಯವಸ್ಥೆಯಾಗಿ ಮತ್ತಷ್ಟು ಬಲಿಷ್ಠಗೊಳಿಸುವ ಪ್ರಾಮಾಣಿಕ ಪ್ರಯತ್ನ ಇದಾಗಿದೆ.

- ಇನ್ನುಮುಂದೆ ಗ್ರಾಮೀಣ ಪ್ರದೇಶದಲ್ಲಿನ ಕಿರಿಯ/ಹಿರಿಯ ಪ್ರಾಥಮಿಕ ಶಾಲೆಗಳ ಎಸ್.ಡಿ.ಎಮ್.ಸಿ. ಗಳು ಗ್ರಾಮ

ಪಂಚಾಯಿತಿಯ ಸೌಕರ್ಯಗಳ ಸಮಿತಿಯ ಭಾಗವಾಗಿ ಕೆಲಸ ನಿರ್ವಹಿಸಲಿದ್ದು, ಎಸ್.ಡಿ.ಎಮ್.ಸಿ. ಗಳನ್ನು ಉಪವಿಧಿಗಳನ್ವಯ ರಚಿಸುವ ಮತ್ತು ಮೇಲ್ವಿಚಾರಣೆ ಮಾಡುವ ಜವಾಬ್ದಾರಿ ಸಿ.ಎ.ಸಿ.ಗಳದ್ದಾಗಿರುತ್ತದೆ.

- ಅಂದರೆ ಸಿ.ಎ.ಸಿ. ಮತ್ತು ಎಸ್.ಡಿ.ಎಮ್.ಸಿ. ಗಳು ಪರಸ್ಪರ ಸಹಕಾರ ಮತ್ತು ಸಮನ್ವಯದಿಂದ ಉಪವಿಧಿಗಳಲ್ಲಿರುವ ಅಂಶಗಳಿಗೆ ಅನುಗುಣವಾಗಿ ಕೆಲಸ ನಿರ್ವಹಿಸಬೇಕಾಗಿದೆ.

- ನಾಗರಿಕ ಸೌಕರ್ಯಸಮಿತಿಯು ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಕಿರಿಯ /ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಗುಣಾತ್ಮಕ ಶಾಲಾ ಶಿಕ್ಷಣವನ್ನು ಖಚಿತಪಡಿಸುವ ನಿಟ್ಟಿನಲ್ಲಿ ಎಸ್.ಡಿ.ಎಮ್.ಸಿ.ಗಳಿಗೆ ಎಲ್ಲಾ ರೀತಿಯ ಬೆಂಬಲ ಸಹಕಾರ ಮತ್ತು ಉತ್ತೇಜನವನ್ನು ನೀಡಬೇಕಾಗಿದೆ.

- ಇದೇರೀತಿಯಲ್ಲಿ ಎಸ್.ಡಿ.ಎಮ್.ಸಿ. ಗಳು ತಾವು ರಚಿಸುವ ಶಾಲಾಭಿವೃದ್ಧಿ ಕ್ರೀಯಾ ಯೋಜನೆಗಳನ್ನು ಸಿ.ಎ.ಸಿ. ಅನುಮೋದನೆಯೊಂದಿಗೆ ಜಾರಿಗೊಳಿಸಬೇಕಾಗಿದೆ.

- ಜೊತೆಗೆ ಪ್ರತಿ ಮೂರು ತಿಂಗಳಿಗೊಮ್ಮೆ ಸಿ.ಎ.ಸಿ. ಯು ಸಮನ್ವಯ ಸಭೆಯಲ್ಲಿ ಪಾಲ್ಗೊಂಡು ಶೈಕ್ಷಣಿಕ ಅಭಿವೃದ್ಧಿಯ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿ ತಿರ್ಮಾನ ಕೈಗೊಳ್ಳಬಹುದಾಗಿದೆ.

- ಶಾಲೆಗೆ ಬೇಕಾದ ಅಗತ್ಯತೆ ಪಂಚಾಯಿತಿಯ ಗಮನಸೆಳೆಯುದರ ಮೂಲಕ ಪಂಚಾಯಿತಿ ವ್ಯಾಪ್ತಿಯಲ್ಲಿ ಎಲ್ಲಾ ಮಕ್ಕಳಿಗೆ ಗುಣಾತ್ಮಕ ಶಾಲಾ ಶಿಕ್ಷಣ ಸಿಗುವುದನ್ನು ಖಾತರಿಗೊಳಿಸಬೇಕಾಗಿದೆ.

- ಈ ಹಿನ್ನೆಲೆಯಲ್ಲಿ ಎಸ್.ಡಿ.ಎಮ್.ಸಿ. ಮತ್ತು ಸಿ.ಎ.ಸಿ. ಪರಸ್ಪರ ಅನ್ಯೋನ್ಯತೆ ಮತ್ತು ಸಹಕಾರದಿಂದ ಕೆಲಸ ನಿರ್ವಹಿಸಬೇಕಾಗಿದೆ.

***ಎಸ್.ಡಿ.ಎಮ್.ಸಿ. ಮತ್ತು ಶಾಲೆ ನಡುವಿನ ಸಂಬಂಧ***

ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳು ಶಾಲೆಯ ಸಾಂಸ್ಥಿಕ ಭಾಗವಾಗಿದ್ದು ಶಾಲೆಯ ಸವಾಂಗೀಣ ಅಭಿವೃದ್ಧಿಯ ಪೂರ್ಣ ಜವಾಬ್ದಾರಿಯನ್ನು ಹೊಂದಿದೆ. ಶಾಲೆಯ ವ್ಯಾಪ್ತಿಗೆ ಸೇರುವ ಎಲ್ಲಾ ಜನವಸತಿ ಪ್ರದೇಶಗಳಿಗೆ ಹುಟ್ಟಿನಿಂದ ೧೪ ವರ್ಷದ ಮಕ್ಕಳಿಗೆ ಸೂಕ್ತ ಅರೈಕೆ ಶಿಕ್ಷಣ ಪೋಷಣೆ ಮತ್ತು ರಕ್ಷಣೆ ಒದಗಿಸುವ ಜವಾಬ್ದಾರಿ ಎಸ್.ಡಿ.ಎಮ್.ಸಿ. ಗಳದ್ದಾಗಿರುತ್ತದೆ.

- ಶಾಲೆಯ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ಸಭೆ ಸೇರಿ ಶಾಲೆಯ ಸಮಗ್ರ ಅಭಿವೃದ್ಧಿಯ ಬಗ್ಗೆ ಚಿಂತಿಸಿ ವಾಸ್ತವಿಕ ವಾದ ಮತ್ತು ಅನುಷ್ಠಾನ ಗೊಳಿಸಬಹುದಾದ ಕ್ರೀಯಾಯೋಜನೆಯನ್ನು ತಯಾರಿಸಿ ಸಂಪನ್ಮೂಲಗಳನ್ನು ಕ್ರೂಢಿಕರಿಸಿ ಶಾಲೆಯ ಸರ್ವೋತೋಮುಖ ಅಭಿವೃದ್ದಿಗೆ ಶ್ರಮಿಸಬೇಕಾಗಿದೆ.

- ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳು ಶಾಲೆಯ ಏಕಮುಖ ಅಭಿವೃದ್ದಿಗೆ ಪ್ರಯತ್ನಿಸದೇ ಸಾರ್ವತ್ರೀಕರಣದ ಎಲ್ಲಾ ಆರು ಅಂಶಗಳಿಗೆ ಒತ್ತು ನೀಡಬೇಕಾಗಿದೆ.

- ಎಸ್.ಡಿ.ಎಮ್.ಸಿ.ಯ ಪಾಲಕರ ಸದಸ್ಯರು ಮತ್ತು ಸಮುದಾಯ ಎಸ್.ಡಿ.ಎಮ್.ಸಿ. ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸುವಂತೆ ಪ್ರೇರೆಪಿಸುವುದು ಮತ್ತು ಶೈಕ್ಷಣಿಕ ಆಡಳಿತ ವ್ಯವಸ್ಥೆಯ ಅಧಿಕಾರಿಗಳ ಜೊತೆ ಸಂಪರ್ಕವಿಟ್ಟುಕೊಂಡು ಶಾಲೆಯ ಅಗತ್ಯ ಮತ್ತು ಆಡಳಿತಕ್ಕೆ ಸಂಬಂಧಿಸಿದ ಸಂವಹನೆಯನ್ನು ಪರಿಣಾಮಕಾರಿಯಾಗಿ ನಡೆಸಲು ಅನುವಾಗುವಂತೆ ಕೆಲಸ ನಿರ್ವಹಿಸುವುದು.

- ಶಾಲೆಯ ಇನ್ನೊಂದು ಮುಖವಾದ ಶಿಕ್ಷಕರು ಶಾಲಾ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುವಂತೆ ಸಹಾಯವಾಗುವ ವಾತಾವರಣವನ್ನು ಸೃಷ್ಟಿಸುವುದು ಮತ್ತು ಸಮುದಾಯದ ಭಾಗವಹಿಸುವಿಕೆಗೆ ಸೂಕ್ತ ಪ್ರೇರೇಪಣೆ ಮತ್ತು ಬೆಂಬಲ ನೀಡುವ ಕೆಲಸವನ್ನು ನಿರಂತರವಾಗಿ ನಡೆಸಬೇಕಾಗಿದೆ.

- ಶಾಲೆಯ ಕೇಂದ್ರ ಬಿಂದುವಾದ ಮಕ್ಕಳು, ಶಿಕ್ಷಕ, ಪಾಲಕರ ನಡುವಿನ ಸೇತುವೆಯಾಗಿ ನಿರ್ವಹಿಸುವುದರ ಮೂಲಕ ಪಾಲಕರು ಮತ್ತು ಶಿಕ್ಷಕರು ಗುಣಾತ್ಮಕ ಶಿಕ್ಷಣ ಅಡಿಯಲ್ಲಿ ಎಲ್ಲಾ ರೀತಿಯಲ್ಲೂ ನೆರವಾಗುವಂತೆ ತಮ್ಮ ಅಗತ್ಯ ಮತ್ತು ಸಮಸ್ಯೆಗಳನ್ನು ಶಿಕ್ಷಕರಲ್ಲಿ ಮತ್ತು ಪಾಲಕರಲ್ಲಿ ಹಂಚಿಕೊಳ್ಳಬೇಕು.

- ಎಸ್.ಡಿ.ಎಮ್.ಸಿ. ಮತ್ತು ಶಾಲೆಯ ಕೇಂದ್ರ ಬಿಂದು ಮಗುವಾಗಿರುವದರಿಂದ ಎಸ್.ಡಿ.ಎಮ್.ಸಿ. ಮತ್ತು ಶಾಲೆಯು ಒಟ್ಟಾರೆ ತೆಗೆದುಕೊಳ್ಳುವ ಎಲ್ಲಾ ತೀರ್ಮಾಣಗಳು ಮತ್ತು ಕಾರ್ಯಕ್ರಮಗಳು ಮಕ್ಕಳ ಹಿತದೃಷ್ಟಿಯಿಂದ ಕೂಡಿರಬೇಕು.

ಈ ಎಲ್ಲಾ ಪ್ರಕ್ರಿಯೆಗಳಲ್ಲಿ ಮಕ್ಕಳೊಡನೆ ಸಕ್ರಿಯವಾಗಿ ಪಾಲ್ಗೊಳ್ಳವಂತೆ ಒಂದು ಉತ್ತಮ ವಾತಾವರಣವನ್ನು ನಿರ್ಮಾಣಮಾಡುವುದು ಎಸ್.ಡಿ.ಎಮ್.ಸಿ. ಮತ್ತು ಶಾಲೆಯ ಪ್ರಮುಖ ಗುರಿಯಾಗಬೇಕು.

*ಉಪವಿಧಿಗಳನ್ವಯ ಎಸ್.ಡಿ.ಎಮ್.ಸಿ. ರಚನೆ*

- ನಾಗರಿಕ ಸೌಲಭ್ಯಗಳ ಸಮಿತಿಯು ಪಂಚಾಯತಿ ಪ್ರದೇಶದ ವ್ಯಾಪ್ತಿಯೊಳಗೆ ಪ್ರಾಥಮಿಕ ಶಾಲೆಗಾಗಿ ಒಂದು ಗ್ರಾಮ ಪಂಚಾಯಿತಿ ಶಾಲಾ ಅಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯನ್ನು ರಚಿಸುವುದು.

- ಇದು ಸದರಿ ಶಾಲೆಯ ಮುಖ್ಯ ಶಿಕ್ಷಕರಿಗೆ ಅಂಥ ಶಾಲಾ ಅಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ರಚನೆಯ ಕಾರ್ಯವನ್ನು ಪ್ರತ್ಯಾಯೋಜಿಸತಕ್ಕದ್ದು.

ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯು ಕೆಳಗೆ ನಿಯಮಿಸಲಾದ ರೀತಿಯಲ್ಲಿ ಮುಂದಿನ ವ್ಯಕ್ತಿಗಳನ್ನು ಒಳಗೊಂಡರಬೇಕು.

- ತಂದೆ ತಾಯಿಯರ ಪರಿಷತ್ತು, ತಮ್ಮ ಪೈಕಿ ೧೩ ಜನ ಪ್ರತಿಧಿಗಳನ್ನು ಶಾಲಾ ಅಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಗೆ ಅಯ್ಕೆ ಮಾಡಬೇಕು. ಆ ೧೩ ಜನ ಪ್ರತಿನಿಧಿಗಳಲ್ಲಿ, ಕನಿಷ್ಠ ೧೦ ಮಹಿಳೆಯರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಮುದಾಯದಿಂದ ತಲಾ ಒಬ್ಬರು, ಮತ್ತು ಅಲ್ಪ ಸಂಖ್ಯಾತ ಸಮುದಾಯದ ಒಬ್ಬ ಪ್ರತಿನಿಧಿಯನ್ನು ಒಳಗೊಂಡಿರಬೇಕು.

- ಶಾಲೆಯ ಮುಖ್ಯ ಶಿಕ್ಷಕರು, ಆರೋಗ್ಯ ಕಾರ್ಯಕರ್ತರು ಮತ್ತು ಅಂಗನವಾಡಿ ಶಿಕ್ಷಕಿ ಇವರು ಪದನಿಮಿತ್ತ ಸದಸ್ಯರಾಗಿರಬೇಕು.

- ಸಾಧ್ಯವಿರುವ ಕಡೆಗಳಲ್ಲಿ, ಶಾಲೆಯ ಉನ್ನತ ತರಗತಿಯಿಂದ ಸಂಬಂಧಪಟ್ಟ ತರಗತಿಗಳ ವಿದ್ಯಾರ್ಥಿಗಳೇ ಆಯ್ಕೆ ಮಾಡಿದ ಒಬ್ಬ ವಿದ್ಯಾರ್ಥಿ. ಎಂದರೆ, ಒಬ್ಬ ವಿದ್ಯಾರ್ಥಿ ಅಥವಾ ವಿದ್ಯಾರ್ಥಿನಿ ಇವರು ಶಾಲಾ ಅಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯಲ್ಲಿ ವಿದ್ಯಾರ್ಥಿಗಳ ಪ್ರತಿನಿಧಿಗಳಾಗಿರಬೇಕು.

**ವಿವರಣೆ** : ಬಾಲಕ ಶಾಲೆಯಲ್ಲಿದ್ದಾಗ, ಒಬ್ಬ ಬಾಲಕ ಪ್ರತಿನಿಧಿಯನ್ನು ಮತ್ತು ಬಾಲಕಿಯರ ಶಾಲೆಯಾಗಿದ್ದಲ್ಲಿ ಒಬ್ಬ ಬಾಲಕಿಯನ್ನು, ಉನ್ನತ ತರಗತಿಯಿಂದ ಆಯ್ಕೆಮಾಡಿಕೊಳ್ಳಬೇಕು.

- ಮೇಲ್ಕಂಡ (ಬಿ) ಖಂಡದ ಅಡಿಯಲ್ಲಿ ನೇಮಕ ಮಾಡಲಾದ ವ್ಯಕ್ತಿಗಳು, ಈ ಮುಂದಿನ ವ್ಯಕ್ತಿಗಳು ಲಭ್ಯವಿರುವ ಕಡೆಗಳಲ್ಲಿ ಅಂಥವರನ್ನು ನಾಮನಿರ್ದೇಶನ ಮಾಡಬೇಕು.

೧. ಗ್ರಾಮದಲ್ಲಿನ ಯುವತಿ – ಯುವಕ ಮಂಡಳಿಯಿಂದ ಅಥವಾ ಎಸ್.ಹೆಚ್.ಜಿ.(Self Help Group) ಯಿಂದ ಒಬ್ಬ ಪ್ರತಿನಿಧಿ.

೨. ಹಳ್ಳಿಯಲ್ಲಿ ವಾಸವಾಗಿರುವ ಒಬ್ಬ ಶಿಕ್ಷಣ ತಜ್ಞ ಅಥವಾ ಹಳ್ಳಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎನ್.ಜಿ.ಓ. / ಎನ್.ಪಿ.ಓ. ಗಳ ಪೈಕಿ ಒಬ್ಬ ಪ್ರತಿನಿಧಿ.

**ವಿವರಣೆ** : ಈ ಉಪಬಂಧದ ಉದ್ದೇಶಕ್ಕಾಗಿ, ಒಬ್ಬ ಶಿಕ್ಷಣ ತಜ್ಞ ಎಂದರೆ ಪದವಿಯನ್ನು ಪೂರ್ಣಗೊಳಿಸಿರುವ ಯಾವುದೇ ವ್ಯಕ್ತಿ ಮತ್ತು ಇದು ಇಂದಿನ ಅಥವಾ ನಿವೃತ್ತ ಶಿಕ್ಷಕರನ್ನು ಒಳಗೊಳ್ಳುತ್ತದೆ.

೩. ರೂ.೧೦.೦೦೦/– ಗಳಿಗೆ ಸಮನಾದ ಅಥವಾ ಅದಕ್ಕಿಂತ ಅಧಿಕ ಮೌಲ್ಯ ಹೊಂದಿರುವ, ಜಮೀನನ್ನು ಅಥವಾ ನಗದು ಅಥವಾ ವಸ್ತುವನ್ನು ಶಾಲೆಗೆ ನೀಡಿರುವ ಒಬ್ಬ ದಾನಿ.

***ಎಸ್.ಡಿ.ಎಮ್.ಸಿ. ಸಭೆ ಮತ್ತು ಮಾದರಿ ನಡುವಳಿಗಳು***

**ಎಸ್.ಡಿ.ಎಮ್.ಸಿ. ಸಭೆ**

ಶಾಲಾ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆಗೆ ತರಲು ಹಾಗೂ ಶಾಲಾ ಆಡಳಿತದಲ್ಲಿ ಸಮುದಾಯದ ಸಕ್ರಿಯ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸುವಲ್ಲಿ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಪಾತ್ರ ಮಹತ್ವದ್ದಾಗಿದೆ.

ಶಾಲೆಯ ಸರ್ವಾಂಗೀಣ ಅಭಿವೃದ್ಧಿಯ ಬಗ್ಗೆ ಪರಾಮರ್ಶಿಸಿ ನಿರ್ಣಯಗಳನ್ನು ಅನುಷ್ಠಾನಗೊಳಿಸಲು ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯು ನಿಗದಿತ ಅವಧಿಯಲ್ಲಿ ಸಭೆಗಳನ್ನು ನಡೆಸುತ್ತದೆ.

**೧. ಸಭೆಯ ಉದ್ದೇಶ**

- ನಿಗದಿತ ವಿಷಯ ಪಟ್ಟಿಯ ಪ್ರಕಾರ ವಿಷಯಗಳನ್ನು ಚರ್ಚಿಸಿ ನಿರ್ಣಯ ತೆಗೆದುಕೊಳ್ಳವುದು.
- ನಡೆಯುತ್ತಿರುವ ಕಾರ್ಯಗಳ ಬಗ್ಗೆ ಸಮಿತಿಯ ಸದಸ್ಯರಿಗೆ ಅರಿವು ಮೂಡಿಸುವುದು.
- ಹಿಂದಿನ ಸಭೆಯ ನಿರ್ಣಯಗಳ ಅನುಷ್ಠಾನದ ಬಗ್ಗೆ ಅವಲೋಕನ.
- ಸದಸ್ಯರಿಗೆ ಜವಾಬ್ದಾರಿಗಳ ಹಂಚಿಕೆ.

**೨. ಸಭೆಯ ಸಿದ್ಧತೆ ಹೇಗಿರಬೇಕು?**

- ಸಭೆಯಲ್ಲಿ ಚರ್ಚಿಸಬೇಕಾದ ವಿಚಾರಗಳನ್ನು ಮೊದಲೇ ನಿರ್ಧರಿಸಿ, ವಿಷಯ ಪಟ್ಟಿ ತಯಾರಿಸಬೇಕು.
- ಸಭೆ ನಡೆಸುವ ಜ್ಞಾಪನದ ಜೊತೆಯಲ್ಲಿಯೇ ವಿಷಯ ಪಟ್ಟಿ ಲಗತ್ತಿಸಬೇಕು.
- ಸಭೆಯು ನಡೆಯುವ ಒಂದು ವಾರದ ಮೊದಲಿಗೆ ಸದಸ್ಯರಿಗೆ ಜ್ಞಾಪನ ಪತ್ರ ತಲುಪಬೇಕು.

**೩. ಸಭೆ ಮಾಡುವುದು ಹೇಗೆ?**

- ಕಾರ್ಯದರ್ಶಿಗಳು, ಸಭೆಯ ಅಧ್ಯಕ್ಷರುಗಳು, ಉಪಾಧ್ಯಕ್ಷರು, ಹಾಗೂ ಸದಸ್ಯರನ್ನು ಸ್ವಾಗತಿಸುವುದು.
- ಮೊದಲ ಸಭೆಯಾಗಿದ್ದಲ್ಲಿ ಎಲ್ಲರ ಪರಸ್ಪರ ಪರಿಚಯ ಮಾಡಿಸುವುದು.
- ಸಭೆಗೆ ಹಾಜರಾದವರ ಸಹಿ ಪಡೆಯುವುದು.
- ಸಭೆಯ ಕೋರಂ ಅಧ್ಯಕ್ಷರು, ಉಪಾಧ್ಯಕ್ಷರು ಸೇರಿದಂತೆ ಚುನಾಯಿತ ಸದಸ್ಯರಲ್ಲಿ ಕನಿಷ್ಠ ಐದು ಮಂದಿ ಸಭೆಗೆ ಹಾಜರಿರುವುದನ್ನು ಖಚಿತಪಡಿಸಿಕೊಳ್ಳಬೇಕು.
- ಕೋರಂ ಇಲ್ಲದಿದ್ದಲ್ಲಿ ಸದರೀ ದಿನಾಂಕದಿಂದ ೪ ದಿನಗಳಿಗೆ ಮೀರದಂತೆ ಮುಂದಿನ ಸಭೆಯ ದಿನಾಂಕ ನಿರ್ಧರಿಸಿ ಸಭೆ ನಡೆಸುವುದು.
- ಹಿಂದಿನ ಸಭೆಯ ನಿರ್ಣಯಗಳ ಅನುಪಾಲನೆ ಬಗ್ಗೆ ಪರಾಮರ್ಶಿಸುವುದು.
- ವಿಷಯ ಪಟ್ಟಿಯಲ್ಲಿನ ವಿಷಯಗಳನ್ನು ಅನುಕ್ರಮವಾಗಿ ಚರ್ಚಿಸುವುದು.
- ಚರ್ಚಿಸಿದ ವಿಷಯಗಳು ಮತ್ತು ನಿರ್ಣಯಗಳು ನಡುವಳಿಯ ರೂಪದಲ್ಲಿ ದಾಖಲಿಸುವುದು.
- ದಾಖಲಿಸಿದ ನಿರ್ಣಯಗಳನ್ನು ಪುನಃ ಓದಿ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಹಾಜರಿದ್ದ ಸದಸ್ಯರ ಸಹಿ ಪಡೆಯುವುದು.
- ಕಾರಣಾಂತರಗಳಿಂದ ಸಭೆಯ ಅಧ್ಯಕ್ಷರು ಗೈರು ಹಾಜರಾದಲ್ಲಿ ಉಪಾಧ್ಯಕ್ಷರು ಅಧ್ಯಕ್ಷತೆವಹಿಸುವುದು.
- ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಗೈರು ಹಾಜರಾಗಿದ್ದಲ್ಲಿ ಸಭೆಯಲ್ಲಿ ಹಾಜರಾಗಿರುವ ಒಬ್ಬ ಚುನಾಯಿತ ಪಾಲಕ ಸದಸ್ಯರು ಅಂದಿನ ಸಭಾಧ್ಯಕ್ಷತೆಯನ್ನು ವಹಿಸುವುದು.

*೪. ಸಭಾ ಜ್ಞಾಪನ ಒಂದು ನಮೂನೆ*

- ಅಧ್ಯಕ್ಷರ ಸೂಚನೆಗಳಿಗನ್ವಯ ದಿನಾಂಕ ________ ರಂದು ________ ಗಂಟೆಗೆ ಸರಿಯಾಗಿ ಮುಖ್ಯ ಶಿಕ್ಷಕರ ಕೊಠಡಿಯಲ್ಲಿ ಎಸ್.ಡಿ.ಎಮ್.ಸಿ. ಸಭೆ ಕರೆಯಲಾಗಿದೆ. ದಯಮಾಡಿ ಮೇಲ್ಕಾಣಿಸಿದ ದಿನಾಂಕದಲ್ಲಿ ನಿಗದಿ ಪಡಿಸಿದ ಸಮಯಕ್ಕೆ ಸರಿಯಾಗಿ ಸಭೆಗೆ ಹಾಜರಾಗಿ ತಮ್ಮ ಸಲಹೆ ಹಾಗೂ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ಸಭೆಯನ್ನು ಯಶಸ್ವಿಗೊಳಿಸಬೇಕಾಗಿ ಕೋರಿದೆ.

*೫. ಅಜೆಂಡಾ ಒಂದು ನಮೂನೆ*

ದಿನಾಂಕ ______ ರಂದು _____ಗಂಟೆಗೆ ಪ್ರಾರಂಭವಾಗಲಿರುವ ಸಭೆಯಲಿ ಚರ್ಚಿಸಬೇಕಾದ ವಿಷಯ ಪಟ್ಟಿ ಅಜೆಂಡಾ ಕೆಳಕಂಡಂತೆ ಇದೆ.

೧. ಶಾಲೆ ಬಿಟ್ಟ ಮಕ್ಕಳ ಬಗ್ಗೆ.
೨. ಕೆ.ಎಸ್.ಕ್ಯೂ.ಎ.ಓ ಫಲಿತಾಂಶದ ಬಗ್ಗೆ.
೩. ವಿಶೇಷ ಸಮುದಾಯತ್ತದ ಶಾಲಾ ಕಾರ್ಯಕ್ರಮದ ಬಗ್ಗೆ.
೪. ಅನುದಾನದ ಅನುಮೋದನೆ.
೫. ೬೦ ನೇ ಸ್ವಾತಂತ್ರ್ಯ ದಿನಾಚರಣೆ ಬಗ್ಗೆ.
೭. ಅಧ್ಯಕ್ಷರ ಅಪ್ಪಣೆ ಮೇರೆಗೆ ಇತರೆ ವಿಷಯಗಳು.

*೬. ಸದಸ್ಯರ ಪಾತ್ರ ಸಭೆಯಲ್ಲಿ*

- ಸಭೆಗೆ ಸಮಯಕ್ಕೆ ಸರಿಯಾಗಿ ಹಾಜರಾಗುವುದು.
- ವಿಷಯಪಟ್ಟಿಗೆ ಸಂಬಂಧಿಸಿದಂತೆ ಸಿದ್ದತೆ ಮಾಡಿಕೊಂಡು ಹಾಜರಾಗುವುದು.
- ಚರ್ಚೆಯಲ್ಲಿ ವಿಷಯಾಂತರ ಆಗದಂತೆ ನೋಡಿಕೊಳ್ಳುವುದು.
- ಎಲ್ಲಾ ಸದಸ್ಯರು ಚರ್ಚೆಯಲ್ಲಿ ಪಾಲ್ಗೊಳ್ಳುವುದು.
- ಜವಾಬ್ದಾರಿಯಿಂದ ವರ್ತಿಸುವುದು.
- ಕೆಲಸ ಕಾರ್ಯಗಳನ್ನು ಹಂಚಿಕೊಳ್ಳುವುದು.

*೭. ಸಭೆಯ ನಂತರ.*

- ಸಭೆಯ ನಿರ್ಣಯಗಳನ್ನು ಕಾರ್ಯಗತ ಮಾಡುವುದು.
- ಅವಶ್ಯಕ ಸಂಪನ್ಮೂಲಗಳ ಕ್ರೂಢಿಕರಣ.
- ಅನುಪಾಲನಾ ಸಮಯದಲ್ಲಿ ನಿರೀಕ್ಷಿತ ಅಡಚಣೆಗಳು ಬಂದಲ್ಲಿ ಸದಸ್ಯರೆಲ್ಲರೂ ಸೇರಿ ನಿವಾರಿಸುವುದು.

- ಸಮುದಾಯದ ಸಂಪೂರ್ಣ ಸಹಕಾರ ಪಡೆಯುವುದು.

*೮. ಮಾದರಿ ನಡುವಳಿ ಒಂದು ನಮೂನೆ.*

ದಿನಾಂಕ ____ ರಂದು ನಡೆದ ಶಾಲಾ ಎಸ್.ಡಿ.ಎಮ್.ಸಿ. ಸಭೆಯ ನಡುವಳಿಗಳ ಒಂದು ನಮೂನೆ. ಈ ದಿನ ನಡೆದ ಶಾಲಾ ಎಸ್.ಡಿ.ಎಮ್.ಸಿ. ಸದಸ್ಯರು ಮತ್ತು ಪದಾದಿಕಾರಿಗಳ ಸಭೆಯನ್ನು ಅಧ್ಯಕ್ಷರಾದ ಶ್ರೀಮತಿ/ ಶ್ರೀಯುತ__________ರ ಅಧ್ಯಕ್ಷತೆಯಲ್ಲಿ ನಡೆಸಿ ಈ ಕೆಳಕಂಡ ನಿರ್ಣಯಗಳನ್ನು ಕೈಗೊಳ್ಳಲಾಯಿತು.
ಹಾಜರಿದ್ದ ಸದಸ್ಯರ ಸಂಖ್ಯೆ____________

### *ಎಸ್.ಡಿ.ಎಮ್.ಸಿ. ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಸದಸ್ಯ ಕಾರ್ಯದರ್ಶಿಯವರ ಅಧಿಕಾರ ಹಾಗೂ ಕರ್ತವ್ಯಗಳು*

*ಅಧ್ಯಕ್ಷರ ಪ್ರಕಾರ್ಯಗಳು*

ಎ) ಅಧ್ಯಕ್ಷರು ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

I. ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಅಧ್ಯಕ್ಷರಾಗಿ ಸಭೆಗಳ ಅಧ್ಯಕ್ಷತೆ ವಹಿಸುವುದು.

II. ಮುಖ್ಯ ಶಿಕ್ಷಕರಿಗೆ ಸಾಂದರ್ಭಿಕ ರಜೆ ನೀಡುವುದು.

III. ದೂರುಗಳ ಪೆಟ್ಟಿಗೆಯನ್ನು ಆ ಸಮಯದಲ್ಲಿ ಅಲ್ಲಿ ಅಭ್ಯವಿರುವ ಕನಿಷ್ಠ ಒಬ್ಬ ಶಿಕ್ಷಕ ಮತ್ತು ವಿದ್ಯಾರ್ಥಿಯ ಉಪಸ್ಥಿತಿಯಲ್ಲಿ ಕನಿಷ್ಠ ವಾರಕ್ಕೊಮ್ಮೆ ತೆರೆಯುವುದು.

ಬಿ) ಅಧ್ಯಕ್ಷರು ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯು ಮಾರ್ಗದರ್ಶನ ನೀಡುವಂಥ ಇತರ ಕಾರ್ಯಗಳನ್ನು ಸಹ ನಿರ್ವಹಿಸತಕ್ಕದ್ದು.

*ಉಪಾಧ್ಯಕ್ಷರ ಕಾರ್ಯಗಳು*

ಎ) ಅಧ್ಯಕ್ಷರ ಗೈರುಹಾಜರಿಲ್ಲಿದ್ದ, ಉಪಾಧ್ಯಕ್ಷರು ಎಸ್.ಡಿ.ಎಮ್.ಸಿ. ಉಪವಿಧಿಗಳ ೭ನೇ ಖಂಡದಲ್ಲಿ ನಿರ್ಧಿಷ್ಟ ಪಡಿಸಲಾದಂತೆ ಅಧ್ಯಕ್ಷರ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

ಬಿ) ಉಪಾಧ್ಯಕ್ಷರು ಶಾಲಾ ಅಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಮಾರ್ಗದರ್ಶನ ನೀಡುವಂತಹ ಇತರ ಎಲ್ಲಾ ಕಾರ್ಯಗಳನ್ನು ಸಹ ನಿರ್ವಹಿಸುವುದು.

*ಸದಸ್ಯ ಕಾರ್ಯದರ್ಶಿಯ ಪ್ರಕಾರ್ಯಗಳು*

ಎ) ಸದಸ್ಯ ಕಾರ್ಯದರ್ಶಿಯು ಈ ಮುಂದಿನ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

I. ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭಕ್ಕೆ ಕನಿಷ್ಠ ಒಂದು ತಿಂಗಳ ಮೊದಲು ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಅನುಮೋದನೆ ಪಡೆದು ವಾರ್ಷಿಕ ಕ್ರಿಯಾಯೋಜನೆಯನ್ನು ಸಿದ್ದಪಡಿಸುವುದು; ಮತ್ತು ಅದನ್ನು ಸಿದ್ದ ಪಡಿಸಿ ಒಂದು ಸಿ.ಎ.ಸಿ. ಗೆ ಸಲ್ಲಿಸತಕ್ಕದ್ದು.

II. ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಸಭೆಗೆ ಕಾರ್ಯಸೂಚಿ ತಯಾರಿಸುವುದು.

ವಿವರಣೆ: ಸಭೆಗಳ ಕಾರ್ಯಸೂಚಿಯು ಶಾಲೆಯು ಮತ್ತು ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಮಾಸಿಕ ಲೆಕ್ಕಪತ್ರಗಳು, ಶಾಲಾಭಿವೃದ್ದಿ, ಆಡಳಿತ, ಹಾಜರಾತಿ, ದಾಖಲಾತಿ, ಮಕ್ಕಳನ್ನು ಶಾಲೆಯಲ್ಲಿ ಉಳಿಸಿಕೊಳ್ಳುವುದು ಮತ್ತು ಅವರ ಶೈಕ್ಷಣಿಕ ಸಾಧನೆಗೆ ಸಂಬಂಧಿಸಿದ ಅಂಶಗಳನ್ನು ಒಳಗೊಂಡಿರತಕ್ಕದ್ದು.

III. ಎಸ್.ಡಿ.ಎಮ್.ಸಿ. ಅಧಿನಿಯಮದ ಅಧ್ಯಾಯ ೪ ರ ಅನುಸಾರ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಸಭೆ ಕರೆಯುವುದು ಮತ್ತು ಅದಕ್ಕೆ ಅನುಕೂಲ ಕಲ್ಪಿಸುವುದು ಮತ್ತು ಎಲ್ಲ ಸಭೆಗಳ ನಡವಳಿಗಳನ್ನು ತೆಗೆದುಕೊಳ್ಳುವುದು.

IV. ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಮಾಹಿತಿಗಾಗಿ ಅತನ/ಆಕೆಯ ಅಧಿಕಾರದ ಅಡಿಯಲ್ಲಿ ಬರುವ ಎಲ್ಲ ವಿಷಯಗಳ ಮಾಹಿತಿಯನ್ನು ತಯಾರಿಸುವುದು.

V. ಶಾಲಾಭಿವೃದ್ದಿ ಮತ್ತು ಮೇಲಸ್ತುವಾರಿ ಸಮಿತಿಯ ಲೆಕ್ಕ ಪತ್ರಗಳು ಮತ್ತು ದಾಖಲೆಗಳನ್ನು ಇಟ್ಟುಕೊಳ್ಳುವುದು.

VI. ಆತನ/ಆಕೆಯ ಪ್ರಭಾರದಲ್ಲಿರುವ ಶಾಲೆಗೆ ಸೇರಿರುವ ಎಲ್ಲ ದಸ್ತಾವೇಜುಗಳು ಮತ್ತು ಸ್ವತ್ತಿನ ಸುರಕ್ಷಿತ ಸುಪರ್ದಿಗೆ ಜವಾಬ್ದಾರರಾಗಿರುವುದು.

VII. ಕನಿಷ್ಠ ಪಕ್ಷ, ಪ್ರತಿ ಮೂರು ತಿಂಗಳಿಗೊಮ್ಮೆ ತಂದೆ ತಾಯಿಯರ ಪರಿಷತ್ತು ಮತ್ತು ನಾಗರಿಕ ಸೌಲಭ್ಯ ಸಮಿತಿಗೆ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ಚಟುವಟಿಕೆಗಳ ವರದಿ ಮತ್ತು

ಲೆಕ್ಕಪತ್ರಗಳ ವಿವರಪಟ್ಟಿಯನ್ನು ತಯಾರಿಸುವುದು ಹಾಗೂ ಹಾಜರುಪಡಿಸುವುದು.

VIII. ಪತ್ರವ್ಯವಹಾರ ನಡೆಸುವುದು ಹಾಗೂ ಎಲ್ಲ ನೋಟಿಸುಗಳನ್ನು ಮತ್ತು ಜಾಹಿರಾತುಗಳನ್ನು ಹೊರಡಿಸುವುದು.

ಬಿ) ಸದಸ್ಯಕಾರ್ಯದರ್ಶಿಗಳು ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯು ಮಾರ್ಗದರ್ಶನ ನೀಡುವಂಥ ಇತರ ಎಲ್ಲಾ ಕಾರ್ಯಗಳನ್ನು ಸಹ ನಿರ್ವಹಿಸತಕ್ಕದ್ದು.

***ಸಿ.ಎ.ಸಿ. ಮತ್ತು ಎಸ್.ಡಿ.ಎಮ್.ಸಿ. ಅಧಿಕಾರಗಳು ಮತ್ತು ಕಾರ್ಯಗಳು***

**ಎ) ನಾಗರಿಕ ಸೌಲಭ್ಯ ಸಮಿತಿಯ ಕರ್ತವ್ಯಗಳು ಮತ್ತು ಅಧಿಕಾರಗಳು**

- ನಾಗರಿಕ ಸೌಲಭ್ಯ ಸಮಿತಿಯು ಪಂಚಾಯಿತಿ ಪ್ರದೇಶದ ಪ್ರತಿಯೊಂದು ಪ್ರಾಥಮಿಕ ಶಾಲೆಗಾಗಿ ಒಂದು ಗ್ರಾಮ ಪಂಚಾಯತ್ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯನ್ನು ರಚಿಸುವುದು.

- ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ರಚಿಸುವುದು.

- ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ರಚನಾ ಕಾರ್ಯವನ್ನು ಆಯಾ ಶಾಲೆಯ ಮುಖ್ಯ ಶಿಕ್ಷಕರಿಗೆ ಪ್ರತ್ಯಾಯೋಜಿಸುವುದು.

- ನಿಯಮಾನುಸಾರ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯ ರಚನೆ ಆಗಿದೆಯೇ ಎಂದು ಪರಿಶೀಲನೆ ನಡೆಸುವುದು.

- ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ರ ಅನುಸೂಚಿ ೧ರ ೮ ನೇ ಖಂಡದಲ್ಲಿ ನಿರ್ಧಿಷ್ಟ ಪಡಿಸಲಾದ ಪ್ರಕಾರ್ಯಗಳ ಮುಂದುವರಿಕೆಯಾಗಿ ಈ ಸಂಬಂಧದಲ್ಲಿ ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿಯು ಕೈಗೊಂಡ ಕ್ರಮಗಳನ್ನು ಪರಿಶೀಲನೆ ಮಾಡುವುದು.

- ವಾರ್ಷಿಕ ಕಾಮಗಾರಿ ಯೋಜನೆಗಳ ಅನುಷ್ಠಾನವನ್ನು ನಿಯತವಾಗ ಪರಿಶೀಲನೆ ಮಾಡುವುದು ಹಾಗೂ ಅಗತ್ಯ ನೆರವು ನೀಡುವುದು.

- ಸಿ.ಎ.ಸಿ. ಯು ಮಾಹಿತಿ ವಿನಿಮಯ ಮತ್ತು ಸಮನ್ವಯತೆಯ ಉದ್ದೇಶಕ್ಕಾಗಿ ಶೈಕ್ಷಣಿಕ ವರ್ಷದಲ್ಲಿ ಕನಿಷ್ಠ ಪಕ್ಷ ಪ್ರತಿ ಮೂರು ತಿಂಗಳಿಗೊಮ್ಮೆ ಪಂಚಾಯಿತಿ ಪ್ರದೇಶದ ವ್ಯಾಪ್ತಿಯಲ್ಲಿರುವ ಎಲ್ಲಾ

ಶಾಲೆಗಳ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳ ಪದಾಧಿಕಾರಿಗಳ ಜಂಟಿ ಸಭೆಯನ್ನು ನಡೆಸುವುದು.

- ನಾಗರಿಕ ಸೌಲಭ್ಯ ಸಮಿತಿಯು ತನ್ನ ವ್ಯಾಪ್ತಿಯ ಶಾಲೆಯ ಶಿಕ್ಷಣಕ್ಕಾಗಿ ಮತ್ತು ಶಾಲೆಯ ಮೂಲಭೂತ ಸೌಕರ್ಯಗಳಿಗಾಗಿ ತಾನು ಸ್ವೀಕರಿಸಿದ ಎಲ್ಲಾ ನಿಧಿಗಳನ್ನು ಸ್ವೀಕರಿಸಿದ ಒಂದು ವಾರದೊಳಗೆ ಸಂಬಂಧಿಸಿದ ಶಾಲೆಯ ಲೆಕ್ಕಕ್ಕೆ ವರ್ಗಾಯಿಸತಕ್ಕದ್ದು.

- ನಾಗರಿಕ ಸೌಲಭ್ಯ ಸಮಿತಿಯು ಶಾಲೆಗಳ ಅಗತ್ಯಕ್ಕೆ ತಕ್ಕಂತೆ ಪಂಚಾಯಿತಿ ಪ್ರದೇಶದ ವ್ಯಾಪ್ತಿಯೊಳಗಿನ ಶಾಲೆಗಳ ಲೆಕ್ಕಕ್ಕೆ ಹೆಚ್ಚುವರಿ ನಿಧಿಗಳನ್ನು ವರ್ಗಾಯಿಸಬಹುದು.

- ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಕಾರ್ಯದರ್ಶಿ ತಯಾರಿಸಿದ ಶಾಲಾ ವಾರ್ಷಿಕ ಕ್ರಿಯಾಯೋಜನೆಯನ್ನು ಪರಿಶೀಲಿಸುವುದು ಹಾಗೂ ಅಗತ್ಯ ಸಲಹೆ ಸೂಚನೆಗಳೊಂದಿಗೆ ಒಂದು ವಾರದೊಳಗಾಗಿ ಅನುಮೋದನೆ ನೀಡುವುದು.

- ೬ ರಿಂದ ೧೪ ವಯೋಮಾನದ ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಶಾಲೆಗೆ ಕರೆಯತರುವುದರಲ್ಲಿ ಎಸ್.ಡಿ.ಎಮ್.ಸಿ. ಗೆ ಸಲಹೆ ಸಹಕಾರ ನೀಡುವುದು.

- ಪ್ರಾಥಮಿಕ ಶಾಲೆಗಳಲ್ಲಿ ಪೂರ್ಣ ಪ್ರಮಾಣದ ದಾಖಲಾತಿ ಹಾಗೂ ಹಾಜರಾತಿಗಳನ್ನು ಖಚಿತಪಡಿಸಿಕೊಳ್ಳುವುದು.

- ಶಿಕ್ಷಣದ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು.

- ಮಧ್ಯಾಹ್ನ ಬಿಸಿ ಊಟ ಕಾರ್ಯಕ್ರಮ ಸಮವಸ್ತ್ರ ಪಠ್ಯ ಪುಸ್ತಕ ಮುಂತಾದ ಎಲ್ಲ ಸರ್ಕಾರಿ ಯೋಜನೆಗಳು ಶಾಲೆಯಲ್ಲಿ ಸಕಾಲದಲ್ಲಿ ಅನುಷ್ಠಾನಗೊಳಿಸುವಂತೆ ನೋಡಿಕೊಳ್ಳುವುದು.

- ಸಮೂಹ ಸಂಪನ್ಮೂಲ ವ್ಯಕ್ತಿ ಮತ್ತು ಶೈಕ್ಷಣಿಕ ಸಮನ್ವಯಕಾರಿಗೆ ಶಾಲಾ ವ್ಯವಸ್ಥೆಯ ಸುಧಾರಣೆಯ ಬಗ್ಗೆ ರಚನಾತ್ಮಕ ಸಲಹೆಗಳು ಯಾವುದಾದರೆ ಇದ್ದರೆ ಅವುಗಳನ್ನು ಸೂಚಿಸುವುದು.

- ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಎಲ್ಲಾ ಸ್ವತ್ತುಗಳು ವಿಧಿಗಳು ಮತ್ತು ಹಣಕಾಸಿನ ಮೇಲ್ವಿಚಾರಣೆಯನ್ನು ನಡೆಸುವುದು.

- ಆಟದ ಮೈದಾನ, ಆವರಣ, ಗೋಡೆ, ಕೊಠಡಿಗಳು, ಶೌಚಾಲಯಗಳು, ಕುಡಿಯುವ ನೀರಿನ ಸೌಲಭ್ಯ, ಅಡುಗೆ ಕೋಣೆ ಮುಂತಾದ ಮೂಲ ಸೌಕರ್ಯಗಳು ಹಾಗೂ ಶಾಲೆಗೆ ಅವಶ್ಯವಿರುವ ಇತರ ಸೌಕರ್ಯಗಳನ್ನು ಹೆಚ್ಚಿಸಲು ನೆರವು ನೀಡುವುದು.

- ಶಾಲಾಭಿವೃದ್ಧಿ ಮತ್ತು ಮೆಲುಸ್ತುವಾರಿ ಸಮಿತಿ ಸಲ್ಲಿಸಿದ ವರದಿಯನ್ನು ಪರಿಶಿಲಿಸುವುದು.

- ಉಪವಿಧಿಗಳೊಳಗಿನ ಅಧ್ಯಾಯಕ್ಕೆ ಅನುಸಾರವಾಗಿ ವಿದ್ಯಾರ್ಥಿಗಳ, ತಂದೆ/ತಾಯಿರ, ಶಿಕ್ಷಕರ ಮತ್ತು ಶಾಲೆಯ ಬೋಧಕೇತರ ಸಿಬ್ಬಂದಿ ವರ್ಗದವರ ಕುಂದು ಕೊರತೆಗಳನ್ನು ಹಾಗೂ ದೂರುಗಳನ್ನು ಬಗೆಹರಿಸುವುದು.

- ನೇರವಾಗಿ ಆಗಲಿ, ಅಥವಾ ದೂರು ಪೆಟ್ಟಿಗೆಯ ಮೂಲಕವಾಗಲಿ ಬಂದ ಲಿಖಿತ ಅಥವಾ ಮೌಖಿಕ ದೂರುಗಳನ್ನು ಪರಿಹರಿಸುವುದು.

- ದೂರುಗಳನ್ನು ಪರಿಹರಿಸಲು ಸಿ.ಎ.ಸಿ.ಯು ದ್ವಿ ಸದಸ್ಯ ಸಮಿತಿಯನ್ನು ನೇಮಕ ಮಾಡುವುದು.

- ವಿಚಾರಣಾ ಸಮಿತಿಯು ನೀಡಿದ ವರದಿ ಹಾಗೂ ಶಿಫಾರಸ್ಸುಗಳ ಆಧಾರದ ಮೇಲೆ ಕ್ರಮ ತೆಗೆದುಕೊಳ್ಳುವುದು.

- ಮಕ್ಕಳ ಮೇಲೆ ಯಾವುದೇ ಪ್ರಕಾರದ ದೈಹಿಕ ಅಥವಾ ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದಂತೆ ನಿಯಮಾನುಸಾರ ಕಾರ್ಯ ವಿಧಾನ ಅನುಸರಿಸುವುದು.

- ಎಸ್.ಡಿ.ಎಮ.ಸಿ ಅಸ್ತಿತ್ವದಲ್ಲಿರದ ಸಂದರ್ಭಗಳಲ್ಲಿ ಅದನ್ನು ರದ್ದು ಪಡಿಸಿ ನಿಯಮಾನುಸಾರ ಹೊಸ ಎಸ್.ಡಿ.ಎಮ್.ಸಿ.ಯನ್ನು ರಚಿಸುವ ವರೆಗೆ ಅದರ ಪ್ರಕಾರ್ಯಗಳನ್ನು ಸಿ.ಎ.ಸಿ.. ನಿರ್ವಹಿಸುವುದು.

- ಎಸ್.ಡಿ.ಎಮ್.ಸಿ. ಯಲ್ಲಿನ ಹಣಕಾಸು ವ್ಯವಹಾರಗಳು ದುರುಪಯೋಗವಾಗಿರುವುದು ಸಾಬೀತಾಗಿದ್ದಲ್ಲಿ ಸಿ.ಎ.ಸಿ. ಯು ಅಧ್ಯಕ್ಷ ಹಾಗೂ ಕಾರ್ಯದರ್ಶಿಯವರಿಗೆ ಖಾತೆವ್ಯವಹಾರ ಮುಂದುವರಿಸಲು ಸೂಚನೆ ನೀಡಬಹುದಾಗಿದೆ.

## *ಬಿ) ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಅಧಿಕಾರಗಳ ಮತ್ತು ಕಾರ್ಯಗಳು*

- ಶಾಲೆಯ ವಾರ್ಷಿಕ ಕ್ರಿಯಾಯೋಜನೆ ತಯಾರಿಯಲ್ಲಿ ಸದಸ್ಯ ಕಾರ್ಯದರ್ಶಿಗೆ ಮಾರ್ಗದರ್ಶಣ ನೀಡುವುದು ಮತ್ತು ಪ್ರತಿ ಶೈಕ್ಷಣಿಕ ವರ್ಷ ಪ್ರಾರಂಭವಾಗುವುದಕ್ಕೆ ಕನಿಷ್ಠ ಒಂದು ತಿಂಗಳು ಮೊದಲು ಅದನ್ನು ಅನುಮೋದಿಸುವುದು.

- ಶಿಕ್ಷಕರು, ಬೋಧಕೇತರ ಸಿಬ್ಬಂದಿ ಹಾಗೂ ವಿದ್ಯಾರ್ಥಿಗಳ ಕ್ರಮಬದ್ಧ ಹಾಗೂ ಸಕಾಲಿಕ ಹಾಜರಾತಿಯನ್ನು ನಿಯತವಾಗಿ ಮೇಲ್ವಿಚಾರಣೆ ಮಾಡುವುದು ಹಾಗೂ ಪರಿಶಿಲಿಸುವುದು.

- ಈ ಉದ್ದೇಶಕ್ಕಾಗಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯು ಹಾಜರಾತಿ ಪುಸ್ತಕಗಳನ್ನು ನಿರ್ವಹಿಸಿಕೊಂಡು ಬರುವಂತೆ ಶಾಲೆಯನ್ನು ಅಗತ್ಯ ಪಡಿಸಬಹುದು.

- ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಯಾವುದೇ ಸದಸ್ಯರು ಶಾಲೆಯಲ್ಲಿ ನಿರ್ವಹಿಸಿರುವ ಎಲ್ಲ ಹಾಜರಾತಿ ಪುಸ್ತಕಗಳನ್ನು ಪರಿಶೀಲಿಸುವ ಅಧಿಕಾರ ಹೊಂದಿರುತ್ತಾರೆ.

- ಧರ್ಮ, ಜನಾಂಗ, ಲಿಂಗ, ಭಾಷೆ, ಹುಟ್ಟಿದ ಸ್ಥಳ ಇವು ಯಾವುದನ್ನು ಪರಿಗಣನೆಗೆ ತೆಗೆದುಕೊಳ್ಳದೆ ಗ್ರಾಮದಲ್ಲಿರುವ ಶಾಲೆಗೆ ಹೋಗದ ಎಲ್ಲ ಮಕ್ಕಳು ಶಾಲೆಗೆ ದಾಖಲಾಗುವುದನ್ನು ಖಚಿತಪಡಿಸುವುದು.

- ಇದಕ್ಕಾಗಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯು ಹೆಣ್ಣು ಮಕ್ಕಳು, ಅಂಗವಿಕಲ ಮಕ್ಕಳು, ಬಾಲಕಾರ್ಮಿಕರು ಹಾಗೂ ಅವರ ತಂದೆ/ತಾಯರಿಗಾಗಿ ದಾಖಲಾತಿ ಆಂದೋಲನ ಸೇತುಬಂಧ ಕಾರ್ಯಕ್ರಮಗಳು ಮತ್ತು ವಿಶೇಷ ಪ್ರಚಾರಾಂದೋಲನವನ್ನು ನಡೆಸಬಹುದು.

- ಗ್ರಾಮದಲ್ಲಿರುವ ದೈಹಿಕ ವಿಕಲತೆಯ ಅಥವಾ ಮಾನಸಿಕವಾಗಿ ಅಸ್ಥವ್ಯಸ್ಥಗೊಂಡ ಮಕ್ಕಳ ವಿರುದ್ದ ತಾರಮ್ಯ ನಡೆಯದಿರುವುದನ್ನು ಖಚಿತ ಪಡಿಸುವುದು ಹಾಗೂ ಅವರು ಶಾಲೆಗೆ ಹಾಜರಾಗಲು ಸಮರ್ಥರಾಗುವಂತೆ ಶ್ರವಣ ಸಾಧನಗಳು ಬ್ರೇಲ ಮುಂತಾದ ವಿಶೇಷ ಸೌಲಭ್ಯಗಳನ್ನು ಒದಗಿಸುವುದು.

- ಶಾಲೆಯಿಂದ ಹೊರಗುಳಿದ ಮಕ್ಕಳ ಪ್ರಮಾಣವನ್ನು ನಿಯತ ಕಾಲಿಕವಾಗಿ ಮೇಲ್ವಿಚಾರಣೆ ಮಾಡುವುದು ಮತ್ತು ಶಾಲೆಯಲ್ಲಿರುವ ಎಲ್ಲ ಮಕ್ಕಳ ಹಾಜರಾತಿಯ ಬಗ್ಗೆ ಹಾಗೂ ಅವರನ್ನು ಶಾಲೆಯಲ್ಲೇ ಉಳಿಸಿಕೊಳ್ಳುವ ಬಗ್ಗೆ ಖಚಿತ ಪಡಿಸಿಕೊಳ್ಳುವುದು.

- ಈ ಉದ್ದೇಶಕ್ಕಾಗಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯು ಉಚಿತ ಪಠ್ಯ ಪುಸ್ತಕಗಳು ಮಧ್ಯಾಹ್ನದ ಬಿಸಿ ಊಟ ಸಮವಸ್ತ್ರ ಮತ್ತು ವಿದ್ಯಾರ್ಥಿ ವೇತನಗಳು ಮುಂತಾದ ಪ್ರೋತ್ಸಾಹಕರಗಳ ವಿತರಣೆಯನ್ನು ಖಚಿತಪಡಿಸಿಕೊಳ್ಳುವುದು ಮತ್ತು ಅವುಗಳ ವಿತರಣೆಯ ಮೇಲ್ವಿಚಾರಣೆ ಮಾಡತಕ್ಕದ್ದು.

- ಕನಿಷ್ಠ ಪಕ್ಷ ಮೂರು ತಿಂಗಳಿಗೊಮ್ಮೆ ತಂದೆ ತಾಯಿಯರ ಪರಿಷತ್ತಿನ ಸಭೆಗಳನ್ನು ಕರೆಯುವುದು.

- ಶಾಲೆಗೆ ಮಕ್ಕಳನ್ನು ಕಳಿಸಲು ವಿಫಲರಾಗುವ ತಂದೆ ತಾಯಿಗಳಿಗಾಗಿ ಸಭೆಗಳನ್ನು ನಿಯತಕಾಲಿಕವಾಗಿ ನಡೆಸುವುದು.

- ಶಾಲೆಯಲ್ಲಿ ಸಂಪೂರ್ಣ ನೈರ್ಮಲ್ಯ, ಸುಸ್ಥಿತಿ ಮತ್ತು ಉತ್ತಮ ನಿರ್ವಹಣೆಯಿರುವಂತೆ ನೋಡಿಕೊಳ್ಳುವುದು.

- ಆಟದ ಮೈದಾನ, ಆವರಣ ಗೋಡೆಗಳು, ಕೊಠಡಿಗಳು, ಶೌಚಾಲಯ, ಪೀಠೋಪಕರಣ, ಕುಡಿಯುವ ನೀರಿನ ಸೌಲಭ್ಯ ಮುಂತಾದ ಮೂಲ ಸೌಕರ್ಯಗಳು ಹಾಗೂ ಶಾಲೆಗೆ ಅವಶ್ಯವಿರುವ ಇತರ ಸೌಕರ್ಯಗಳನ್ನು ಹೆಚ್ಚಿಸಲು ನೆರವು ನೀಡುವುದು.

- ಇದಕ್ಕಾಗಿ, ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯು ಯಾವುದೇ ಕಟ್ಟಡಗಳ ಅಥವಾ ಕಾಮಗಾರಿಗಳ ನಿರ್ಮಾಣ, ನಿರ್ವಹಣೆ, ಮಾರ್ಪಾಡು, ಸುಧಾರಣೆ ಅಥವಾ ಅಭಿವೃದ್ಧಿಯನ್ನು ಕೈಗೊಳ್ಳಬಹುದು.

- ಎಲ್ಲ ಪ್ರಕಾರ್ಯಗಳ ಮುಂದುವರಿಕೆಗೆ ಅವಶ್ಯವೆನಿಸುವ ಅಥವಾ ಅನುಕೂಲವೆನಿಸುವ ಸ್ಥಿರ ಅಥವಾ ಸ್ವತ್ತು ಅಥವಾ ಯಾವುದೇ ಹಕ್ಕುಗಳು ಅಥವಾ ವಿಶೇಷ ಸೌಲಭ್ಯಗಳನ್ನು ಆರ್ಜಿಸುವುದು ಖರಿದಿಸುವುದು ಅಥವಾ ಅನ್ಯತಾ ಸ್ವಂತವಾಗಿ ಹೊಂದುವುದು ಅಥವಾ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಗುತ್ತಿಗೆಗೆ ಅಥವಾ ಬಾಡಿಗೆಗೆ ಪಡೆಯುದು.

- ಸ್ವಯಿಚ್ಚೆಯ ಮೇರೆಗೆ ಅಥವಾ ಶಾಲಾ ನಿಧಿಗಳಿಂದ ವೆಚ್ಚವನ್ನು ಭರಿಸಿ ನಿಗದಿ ಪಡಿಸಿದ ಸಂಭಾವಣೆಯನ್ನು ಸಂದಾಯ ಮಾಡುವ ಮೂಲಕ ಅವಶ್ಯವಿರುವೆಡೆ ಸಂದರ್ಭಾನುಸಾರ ಶಿಕ್ಷಕರಿಗಾಗಿ ಅಥವಾ ಬೋಧಕರಾಗಿ ಸ್ಥಳೀಯ ವ್ಯಕ್ತಿಗಳ ಸೇವೆಗಳನ್ನು ಪಡೆಯುವುದು. ಪರಂತು, ನಿಯತ ಹುದ್ದೆಯನ್ನು ಈ ರಿತಿಯಲ್ಲಿ ಖಾಯಂ ಆಗಿ ಭರ್ತಿ ಮಾಡಬಾರದು.

- ವರ್ಷದಲ್ಲಿ ಕನಿಷ್ಠ ಪಕ್ಷ ಇನ್ನೂರಾ ಇಪ್ಪತ್ತು ಬೋಧನಾ ದಿನಗಳನ್ನು ಖಚಿತ ಪಡಿಸುವುದು.

- ಶಿಕ್ಷಕರ ಸಾಧನೆಯನ್ನು ನಿಯತಕಾಲಿಕವಾಗಿ ಅವಲೋಕಿಸುವುದು. ಮತ್ತು ಸರ್ವಶಿಕ್ಷಣ ಅಭಿಯಾನ ಅಥವಾ ಕಾಲಕಾಲಕ್ಕೆ ಅನ್ವಯವಾಗುವಂತ ಕೇಂದ್ರ ಅಥವಾ ರಾಜ್ಯ ಸರ್ಕಾರದ ಯಾವುದೇ ಇತರ ಕಾರ್ಯಕ್ರಮದ ಅಡಿಯಲ್ಲಿ ಗೊತ್ತುಪಡಿಸಿದ ಕನಿಷ್ಠ ಅರ್ಹತಾ ಮಾನದಂಡಗಳನ್ನು ಪಾಲಿಸುವಂತೆ ಮಾಡುವುದು.

- ಶಿಕ್ಷಕರ ಮತ್ತು ಮುಖ್ಯ ಶಿಕ್ಷಕರ ಬೇಡಿಕೆಯನ್ನು ಆಧರಿಸಿ ಶಿಕ್ಷಕರಿಗೆ ಅವಶ್ಯಕತೆಯಾಧಾರಿತ ತರಬೇತಿಗಳನ್ನು ಒದಗಿಸಲು ಅನುಕೂಲ ಕಲ್ಪಿಸುವುದು.

- ವಿದ್ಯಾರ್ಥಿಗಳ ಸಾಧನೆಯನ್ನು ನಿಯತ ಕಾಲಿಕವಾಗಿ ಅವಲೋಕಿಸುವುದು. ಮತ್ತು ಎನ್.ಸಿ.ಇ.ಆರ್.ಟಿ. ಮತ್ತು ರಾಜ್ಯ ಸರ್ಕಾರವು ಗೊತ್ತು ಪಡಿಸಿದ ಮಾನದಂಡಗಳನ್ನು ಪಾಲಿಸುವಂತೆ ನೋಡಿಕೊಳ್ಳುವುದು.

- ಶಾಲೆಯಲ್ಲಿ ಆರೋಗ್ಯ ಕಾರ್ಯಕ್ರಮಗಳನ್ನು ನಿಯತವಾಗಿ ಅವಲೋಕಿಸುವುದು ಮತ್ತು ಮೇಲ್ವಿಚಾರಣೆ ನಡೆಸುವುದು ಮತ್ತು ಮಕ್ಕಳಿಗಾಗಿ ಕ್ರಮಬದ್ಧವಾಗಿ ಆರೋಗ್ಯ ಶಿಬಿರಗಳನ್ನು ನಡೆಸಲು ನೆರವು ನೀಡುವುದು.

- ಶಾಲೆಯ ಮತ್ತು ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಎಲ್ಲ ಸ್ವತ್ತುಗಳು, ನಿಧಿಗಳು ಮತ್ತು ಹಣಕಾಸಿನ ಮೇಲ್ವಿಚಾರಣೆ ನಡೆಸುವುದು.

- ಶಾಲಾಭಿವೃದ್ಧಿಗಾಗಿ ಹಣ ಮತ್ತು ನಿಧಿಗಳನ್ನು ಪಡೆಯಲು ಮನವಿಗಳು ಮತ್ತು ಅರ್ಜಿಗಳನ್ನು ನೀಡುವುದು. ಹಾಗೂ ನಗದು ರೂಪದಲಿ ಯಾವುದೇ ದಾನಗಳು ಅಥವಾ ದೇಣಿಗೆಗಳು ಭದ್ರತೆಗಳು ಅಥವಾ ಚರ ಅಥವಾ ಸ್ಥಿರ ರೂಪದಲ್ಲಿ ಯಾವುದೇ

ಸ್ವತ್ತನ್ನು ಸ್ವೀಕರಿಸುವುದು, ಸಂಗ್ರಹಿಸುವುದು ಮತ್ತು ಅಂಗೀಕರಿಸುವುದು ಮತ್ತು ಅದರ ಸದರೀ ಎಲ್ಲ ಅಥವಾ ಯಾವುದೇ ಪ್ರಕಾರ್ಯಗಳ ಈಡೇರಿಕೆಗಾಗಿ ಅದನ್ನು ಖರ್ಚು ಮಾಡುವುದು.

- ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಕಾರ್ಯವನ್ನು ಅವಲೋಕಿಸುವುದು ಮತ್ತು ಈ ಬಗ್ಗೆ ಕನಿಷ್ಠ ಪಕ್ಷ ಮೂರು ತಿಂಗಳಿಗೊಮ್ಮೆ ತಂದೆ/ ತಾಯಿಯರ ಪರಿಷತ್ತು ಮತ್ತು ಸೌಲಭ್ಯ ಸಮಿತಿಗೆ ವರದಿ ಮಾಡುವುದು. ಶಾಲಾ ಕಾರ್ಯಚಟುವಟಿಕೆಗಳಲ್ಲಿ ಎಲ್ಲ ತಂದೆ/ ತಾಯಿಯರು ಒಳಗೊಳ್ಳುವಂತೆ ಮಾಡಲು (ಶಾಲೆಗೆ ಹೋಗದ ಮಕ್ಕಳ ತಂದೆ/ ತಾಯಿಯರು ಸೇರಿದಂತೆ) ಮತ್ತು ಅವರು ತಮ್ಮ ಮಕ್ಕಳನ್ನು ನಿಯತವಾಗಿ ಶಾಲೆಗೆ ಕಳಿಸುವಂತೆ ಪ್ರೇರೇಪಿಸಲು ನಿಯತ ಕಾಲಿಕವಾಗಿ ತಂದೆ/ ತಾಯಿಯರ ದಿನವನ್ನು ಆಚರಿಸುವುದು.

- ನಾಗರಿಕ ಸೌಲಭ್ಯ ಸಮಿತಿ ಸಿ.ಎ.ಸಿ. ಸಮೂಹ ಸಂಪನ್ಮೂಲ ವ್ಯಕ್ತಿ ಮತ್ತು ಶೈಕ್ಷಣಿಕ ಸಮನ್ವಯಕಾರರಿಗೆ ಶಾಲಾವ್ಯವಸ್ಥೆಯ ಸುಧಾರಣೆಯ ಬಗ್ಗೆ ರಚನಾತ್ಮಕ ಸಲಹೆಗಳಾವುವಾದರೂ ಇದ್ದರೆ ಅವುಗಳನ್ನು ಸೂಚಿಸುವುದು.

- ವರ್ಷದಲ್ಲಿ ನಾಲ್ಕಕ್ಕಿಂತ ಹೆಚ್ಚಿಲ್ಲದಂತೆ ಸ್ಥಳೀಯ ರಜಾದಿನಗಳನ್ನು ನಿರ್ಣಯಿಸುವುದು.

- ಮಧ್ಯಾಹ್ನದ ಬಿಸಿ ಊಟ ಮುಂತಾದ ಎಲ್ಲ ಸರ್ಕಾರಿ ಯೋಜನೆಗಳು ಶಾಲೆಯಲ್ಲಿ ಅನುಷ್ಠಾನಗೊಳಿಸುವಂತೆ ನೋಡಿಕೊಳ್ಳುವುದು.

- ಮಕ್ಕಳು, ಮಕ್ಕಳ ಸಹಾಯವಾಣಿಯ ಉಪಯೋಗ ಮತ್ತು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವಂತೆ ಪ್ರತಿಯೊಂದು ಶಾಲೆಯ, ಮಕ್ಕಳ ಸಹಾಯವಾಣಿ ಸಂಖೆ ೧೦೯೮ ನ್ನು ಪ್ರದರ್ಶಿಸುವಂತೆ ಮತ್ತು ಪ್ರಚಾರ ಮಾಡುವಂತೆ ನೋಡಿಕೊಳ್ಳುವುದು.

- ಒತ್ತುವರಿ ಮತ್ತು ಯಾವುದೇ ಅಡಚಣೆಯಾಗದಂತೆ ಶಾಲಾ ಆವರಣವನ್ನು ರಕ್ಷಿಸುವುದು.

- ಈ ಉಪವಿಧಿಗಳ ೫ನೇ ಅಧ್ಯಾಯಕ್ಕನುಸಾರವಾಗಿ, ವಿದ್ಯಾರ್ಥಿಗಳ, ತಂದೆ/ತಾಯಿಯರ, ಶಿಕ್ಷಕರ ಮತ್ತು ಶಾಲೆಯ ಬೋಧಕೇತರ ಸಿಬ್ಬಂದಿ ವರ್ಗದವರ ಕುಂದು ಕೊರತೆಗಳನ್ನು ಹಾಗೂ ದೂರುಗಳನ್ನು ಬಗೆಹರಿಸುವುದು.

- ಪ್ರಾಸಂಗಿಕವಾದಂತಹ ಇತರ ಎಲ್ಲ ಕಾನುನೂಬದ್ದ ಕಾರ್ಯಗಳು, ಕೃತ್ಯಗಳು ಮತ್ತು ಕೆಲಸಗಳನ್ನು ಮಾಡುವುದು.

*ಸರ್ಕಾರದ ಸೂಚನೆಯಂತೆ ಎಸ್.ಡಿ.ಎಮ್.ಸಿ. ರಚನೆಗಳಿಗೆ ಪರಿಷ್ಕೃತ ಮಾರ್ಗಸೂಚಿಗಳು*

ಎಲ್ಲಾ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಗಳು ಮತ್ತು ಪ್ರೌಢ ಶಾಲೆಗಳಿಗೆ ಶಾಲಾ ಅಭಿವೃದ್ದಿ ಮೇಲುಸ್ತುವಾರಿ ಸಮಿತಿಗಳನ್ನು ರಚಿಸಲು ಮುಖ್ಯೋಪಾಧ್ಯಾಯರು, ಸ್ಥಳೀಯ ಗಣ್ಯರು, ಪೋಷಕ ಪ್ರತಿನಿಧಿಗಳು ಮತ್ತು ವಿದ್ಯಾರ್ಥಿಗಳೆಲ್ಲರ ಸಹಭಾಗಿತ್ವ ಬೇಕಾಗುವುದು.

ಎಸ್.ಡಿ.ಎಮ್.ಸಿ. ಈ ಕೆಳಕಂಡ ಸದಸ್ಯರನ್ನೊಳಗೊಂಡಿರುತ್ತದೆ.

*೧.ಪೋಷಕ ಸಭೆಯಿಂದ ೧೩ ಜನ ಪೋಷಕ ಪ್ರತಿನಿಧಿಗಳು:*

ಎಸ್.ಡಿ.ಎಮ್.ಸಿ.ಯನ್ನು ರಚಿಸುವದಕ್ಕಾಗಿ ಶಾಲಾ ಮುಖ್ಯೋಪಾಧ್ಯಾಯರು, ಊರಿನ/ ಗ್ರಾಮದ ಮುಖ್ಯಸ್ಥರು, ಶಾಲಾ ಪೋಷಕರೆಲ್ಲರೂ ಒಟ್ಟಾರೆ ಸಭೆ ಸೇರಿ ೧೩ ಜನ ಸದಸ್ಯರನ್ನು ನೇಮಿಸುವುದು ಈ ೧೩ ಜನರಲ್ಲಿ ಕನಿಷ್ಠ ೧೦ ಮಹಿಳಾ ಪ್ರತಿನಿಧಿಗಳು, ಕನಿಷ್ಠ ಇಬ್ಬರು ಪರಿಶಿಷ್ಟ ಜಾತಿ ಪಂಗಡಗಳಿಗೆ ಸೇರಿದವರಾಗಿರಬೇಕು. ಒಂದು ವೇಳೆ ಪರಿಶಿಷ್ಟ ಜಾತಿ/ಪಂಗಡ, ಅಲ್ಪಸಂಖ್ಯಾತ ಪ್ರತಿಧಿಗಳು ಲಭ್ಯವಿಲ್ಲದಿದ್ದಲ್ಲಿ ಇತರರಿಂದ ಭರ್ತಿ ಮಾಡಿಸುವುದು. ಯಾವುದೇ ಪೋಷಕರು ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು ಎಸ್.ಡಿ.ಎಮ್.ಸಿ. ಗಳ ಸದಸ್ಯರಾಗಿರಕೂಡದು.

*೨. ಪದನಿಮಿತ್ಯ ಸದಸ್ಯರು ೩*

*೩. ನಾಮನಿರ್ದೇಶಿತ ಸದಸ್ಯರು ೩*

*೩.ಉಪಸಂಹಾರ*

ಎಸ್.ಡಿ.ಎಮ್.ಸಿ. ಯ ಕುರಿತಾಗಿ ಎಲ್ಲಾ ಸಾಹಿತ್ಯಗಳನ್ನು ಅವಲೋಕಿಸಿದಾಗ ಎಸಿ.ಡಿ,ಎಮ್.ಸಿ.ಗಳ ಕುರಿತಾಗಿ ಮಾಹಿತಿ ದೊರೆಯಿತು. ಆದರೂ ಈ ಎಸ್.ಡಿ.ಎಮ್.ಸಿ. ಗಳು ಕಾಲ ಕಾಲಕ್ಕೆ ಸರ್ಕಾರದ ಪರಿಷ್ಕೃತ ಮಾರ್ಗಸೂಚಿಯಂತೆ ಬದಲಾಗುತ್ತಾ ಬಂದಿರುವುದು ಗೊತ್ತಾಗುತ್ತದೆ. ಇನ್ನೂ ಮುಂದೆಯೂ ಬದಲಾವಣೆ ಮಾಡುವ ಸಂದರ್ಭ ಬರಬಹುದು. ಅಲ್ಲಿಯ ತನಕ ಈ ಸಾಹಿತ್ಯ ಪರಿಕರಗಳು ಎಸ್.ಡಿ.ಎಮ್.ಸಿ. ಬಗ್ಗೆ ಸಾಕಷ್ಟು ಮಾಹಿತಿ ನೀಡಿವೆ. ಸರ್ಕಾದ ಉದ್ದೇಶ ಈಡೇರಲು ಎಸ್.ಡಿ.ಎಮ್.ಸಿ. ಗಳು ಶ್ರದ್ದೆವಹಿಸಿದರೆ ಎಲ್ಲ ಮಕ್ಕಳಿಗೂ ಶಿಕ್ಷಣ ಕೊಡುವ ಸರ್ಕಾರದ ಗುರಿ ಖಂಡಿತವಾಗಿ ಈಡೇರುತ್ತದೆ.

# ಅಧ್ಯಾಯ – ೩

## *ಎಸ್.ಡಿ.ಎಮ್.ಸಿ. ಯ ಕಾರ್ಯಚಟುವಟಿಕೆಗಳ ವಿಶ್ಲೇಷಣೆ ಮತ್ತು ಸಹಭಾಗಿತ್ವ ಹೊಂದಿದವರ ಅಭಿಪ್ರಾಯಗಳು*

೧. ಪೀಠಿಕೆ
೨. ಪ್ರಶ್ನಾವಳಿಗಳ ಕೋಷ್ಟಕಗಳು
೩. ವಿಶ್ಲೇಷಣೆ
I. ಶಾಲಾ ಸಿಬದಿಯವರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ
II. ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ
III. ಪುರುಷ ಪಾಲಕರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ
IV. ಮಹಿಳಾ ಪಾಲಕರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ
V. ವಿದ್ಯಾರ್ಥಿಗಳಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ
VI. ವಿದ್ಯಾರ್ಥಿನಿಯರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ

೪. ಉಪಸಂಹಾರ

### ೧.ಪೀಠಿಕೆ

ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟ, ಹಿಡಕಲ್. ಇದು ಕರ್ನಾಟಕ ರಾಜ್ಯದ ಬೆಲ್ಲದ ಜಿಲ್ಲೆಯೆಂದೇ ಖ್ಯಾತಿ ಗಳಿಸಿರುವ ಬೆಳಗಾವಿ ಜಿಲ್ಲೆಯ, ಎಸ್.ಎಸ್.ಎಲ್.ಸಿ. ಪರೀಕ್ಷಾ ಫಲಿತಾಂಶದಲ್ಲಿ ರಾಜ್ಯಕ್ಕೆ ಹಲವು ಬಾರಿ ಪ್ರಥಮ ಸ್ಥಾನ ಗಳಿಸಿ ಖ್ಯಾತಿಗೊಂಡಿರುವ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯ ರಾಯಬಾಗ ತಾಲೂಕಿನ ಹಿಡಕಲ್ ಗ್ರಾಮದ ಮನ್ನಿಕೇರಿ ತೋಟದ ಶಾಲೆಯನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ.

### ಈ ಶಾಲೆಯ ಹಿನ್ನೆಲೆ

ಹಿಡಕಲ್ಲ ಗ್ರಾಮದಲ್ಲಿ ಜನರು ಮೊದಲಿನಿಂದಲೂ ಶಿಕ್ಷಣಕ್ಕೆ ಆದ್ಯತೆ ನೀಡಿದ್ದಾರೆ. ೧೯೧೪ ರಲ್ಲಿ ಪ್ರಾಥಮಿಕ ಶಾಲೆಯು ಗ್ರಾಮದಲ್ಲಿ ಪ್ರಾರಂಭಗೊಂಡಿತು. ನೀರಾವರಿ ಸೌಲಭ್ಯ ದೊರೆತ ನಂತರ ಜನರು ತಮ್ಮ ತೋಟದಲ್ಲಿಯೆ ಮನೆ ಮಾಡಿಕೊಂಡು ನೆಲಸತೊಡಗಿದರು. ನಂತರ ತೋಟ ಪಟ್ಟಿಗಳಲ್ಲಿಯೆ ಜನಸಂಖ್ಯೆ ಹೆಚ್ಚಾಗಿ ತೋಟಗಳಲ್ಲಿಯೆ ಶಾಲೆಗಳು ಪ್ರಾರಂಭ ವಾಗತೊಡಗಿದವು. ಅದರಂತೆಯೆ ೧೯೫೮ ರಲ್ಲಿ ಮನ್ನಿಕೇರಿ ತೋಟದ ಶಾಲೆಯು ಪ್ರಾರಂಭಗೊಂಡಿತು.

೨೩/೦೬/೧೯೫೮ ರಲ್ಲಿ ಒಂದು ಗುಡಸಿಲಿನಲ್ಲಿ ಕೇವಲ ३४ ಮಕ್ಕಳೊಂದಿಗೆ ಶ್ರೀ ಸಿ.ಆರ್.ಮನ್ನಿಕೇರಿಯವರು ಶಾಲೆ ಪ್ರಾರಂಭಿಸಿದರು. ಆರಂಭದಲ್ಲಿ ಕೇವಲ ೧ ರಿಂದ ೪ನೇಯ ತರಗತಿಯವರೆಗಿನ ಕಿರಿಯ ಪ್ರಾಥಮಿಕ ಶಾಲೆಯಾಗಿ ಕಾರ್ಯ ನಿರ್ವಹಿಸತೊಡಗಿತು. ೧೯೯೭ ರಲ್ಲಿ ಡಿ.ಪಿ.ಇ.ಪಿ. ಯೋಜನೆಯಡಿಯಲ್ಲಿ ೫ನೇಯ ತರಗತಿ, ೨೦೦೦ ದಲ್ಲಿ ೬ನೇ ತರಗತಿ,೨೦೦೪ ರಲ್ಲಿ ೭ನೇ ತರಗತಿ ಮತ್ತು ೨೦೦೫ ರಲ್ಲಿ ೮ನೇ ತರಗತಿ ಪ್ರಾರಂಭಗೊಂಡವು. ಇಂದು ೧ ರಿಂದ ೮ನೇಯ ತರಗತಿಯವರೆಗೆ ವರ್ಗಗಳು ನಡೆಯುತ್ತಿವೆ.

೧೯೭೫ ರಲ್ಲಿ ಶಾಲಾ ಕಟ್ಟಡ ನಿರ್ಮಾಣಕ್ಕೆ ೯ ಸಾವಿರ ರೂಪಾಯಿ ಮಂಜೂರಾಯಿತು. ಆಗ ಶ್ರೀ ರಂಗಪ್ಪ ಖಾನಟ್ಟಿಯವರು ೧೦ ಗುಂಟೆ ಭೂಮಿಯನ್ನು ಶಾಲೆಗೆ ಭೂದಾನ ಮಾಡಿದರು. ನಂತರ ೪ ಗುಂಟೆ ಭೂಮಿಯನ್ನು ಪಾಲಕರು ಶಾಲೆಗಾಗಿ ಖರೀದಿಸಿದರು. ಇಂದು ಎಲ್ಲ ಮೂಲಭೂತ ಸೌಕರ್ಯಗಳನ್ನೊಳಗೊಂಡ ಸುಸಜ್ಜಿತವಾದ ಕಟ್ಟಡದಲ್ಲಿ ೧ ರಿಂದ ೮ನೇಯ ತರಗತಿಯವರೆಗಿನ ವಿದ್ಯಾರ್ಥಿಗಳು ಜ್ಞಾನಾರ್ಜನೆ ಮಾಡುತ್ತಿದ್ದಾರೆ. ನಾಲ್ಕೂವರೆ ದಶಕದ ಆಚೆ ಮನ್ನಿಕೇರಿ ಮಾಸ್ತರ ನೆಟ್ಟ ಶಿಕ್ಷಣ ಸಸಿ ಇಂದು ಹೆಮ್ಮರ ಅದು ೨೦೦೮ ರಲ್ಲಿ ಸುವರ್ಣ ಮಹೋತ್ಸವ ಆಚರಿಸಿತು. ಗ್ರಾಮದಲ್ಲಿಯೆ ಮಾದರಿ ಶಾಲೆಯಾಗಿರುವ ಈ ಶಾಲೆಗೆ ಶ್ರಮಿಸಿದವರ ಶ್ರಮವು ಅಪಾರ ಹಾಗೂ ಸದಾ ಸ್ಮರಣೀಯ.

## ೨.ಪ್ರಶ್ನಾವಳಿಗಳ ಕೋಷ್ಟಕಗಳು

**ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ:** ಒಂದು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ***ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟದ ಶಾಲೆಯ*** ಎಲ್ಲ ಏಳು ಜನ ಶಾಲಾ ಸಿಬ್ಬಂದಿಗೆ, ಎಲ್ಲ ೧೯ ಜನ ಎಸ್.ಡಿ.ಎಮ್.ಸಿ ಸದಸ್ಯರುಗಳಿಗೆ, ೧೦ ಜನ ಪುರುಷ ಪಾಲಕರಿಗೆ, ೧೦ ಜನ ಮಹಿಳಾ ಪಾಲಕರಿಗೆ, ೩ನೇ ತರಗತಿಯಿಂದ ೮ನೇ ತರಗತಿಯವರೆಗಿನ ಆಯ್ದ ೧೦ ವಿದ್ಯಾರ್ಥಿಗಳಿಗೆ ಮತ್ತು ೧೦ ವಿದ್ಯಾರ್ಥಿನಿಯರಿಗೆ ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಗಳನ್ನು ಅರಿಯುವ ಉದ್ದೇಶದಿಂದ ಇವರೆಲ್ಲರಿಗೂ ಪ್ರಶ್ನಾವಳಿಗಳ ಮೂಲಕ ಸಂದರ್ಶನ ನಡೆಸಿ ಅಭಿಪ್ರಾಯ ಸಂಗ್ರಹಿಸಲಾಯಿತು. ಈ ಸಂದರ್ಶನದ ವಿವರ ಈ ಕೆಳಗಿನಂತಿದೆ.

### *ಶಾಲಾ ಸಿಬ್ಬಂದಿಗೆ ನಡೆಸಿದ ಸಂದರ್ಶನದ ವಿವರ*

ಕೋಷ್ಟಕ ಸಂಖ್ಯೆ: ೧

| ಪ್ರ.ಸಂ | ಸಮರ್ಪಕವಾಗಿ ಉತ್ತರಿಸಿದವರು | ಅಸಮರ್ಪಕವಾಗಿ ಉತ್ತರಿಸಿದವರು | ಶೇಕಡಾ | | ಶರಾ |
|---|---|---|---|---|---|
| | | | ಸ.ಉ | ಅ.ಸ.ಉ | |
| ೦೧ | ೭ | – | ೧೦೦ | – | |
| ೦೨ | ೭ | – | ೧೦೦ | – | |
| ೦೩ | ೭ | – | ೧೦೦ | – | |
| ೦೪ | ೭ | – | ೧೦೦ | – | |
| ೦೫ | ೭ | – | ೧೦೦ | -- | |
| ೦೬ | ೭ | – | ೧೦೦ | – | |
| ೦೭ | ೭ | – | ೧೦೦ | – | |
| ೦೮ | ೭ | – | ೧೦೦ | – | |
| ೦೯ | ೭ | – | ೧೦೦ | – | |
| ೧೦ | ೭ | – | ೧೦೦ | -- | |
| ೧೧ | ೭ | – | ೧೦೦ | – | |
| ೧೨ | ೭ | – | ೧೦೦ | – | |

ಆಧಾರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.

(ಸ.ಉ= ಸಮರ್ಪಕವಾಗಿ ಉತ್ತರಿಸಿದವರು)(ಅ.ಸ.ಉ= ಅಸಮರ್ಪಕವಾಗಿಉತ್ತರಿಸಿದಚರು)

## ಎಸ್.ಡಿ.ಎಮ್.ಸಿ. ಸದಸ್ಯರಿಗೆ ನಡೆಸಿದ ಸಂದರ್ಶನದ ವಿವರ

ಕೋಷ್ಟಕ ಸಂಖ್ಯೆ: ೨

| ಪ್ರಸಂ | ಸಮರ್ಪಕವಾಗಿ ಉತ್ತರಿಸಿದವರು | ಅಸಮರ್ಪಕವಾಗಿ ಉತ್ತರಿಸಿದವರು | ಶೇಕಡಾ ಸ.ಉ | ಶೇಕಡಾ ಅ.ಸ.ಉ | ಶರಾ |
|---|---|---|---|---|---|
| ೧೦ | ೧೯ | – | ೧೦೦ | – | |
| ೦೨ | ೧೯ | – | ೧೦೦ | – | |
| ೦೩ | ೧೮ | ೧ | ೯೫ | ೫ | |
| ೦೪ | ೧೬ | ೩ | ೮೪ | ೧೬ | |
| ೦೫ | ೧೭ | ೨ | ೮೯ | ೧೧ | |
| ೦೬ | ೧೯ | – | ೧೦೦ | – | |
| ೦೭ | ೧೮ | ೧ | ೯೫ | ೫ | |
| ೦೮ | ೧೭ | ೨ | ೮೯ | ೧೧ | |
| ೦೯ | ೧೮ | ೧ | ೯೫ | ೫ | |
| ೧೦ | ೧೮ | ೧ | ೯೫ | ೫ | |
| ೧೧ | ೧೬ | ೩ | ೮೪ | ೧೬ | |
| ೧೨ | ೧೮ | ೧ | ೯೫ | ೫ | |
| ೧೩ | ೧೯ | – | ೧೦೦ | – | |
| ೧೪ | ೧೯ | – | ೧೦೦ | – | |

ಆಧಾರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.
(ಸ.ಉ= ಸಮರ್ಪಕವಾಗಿ ಉತ್ತರಿಸಿದವರು)(ಅ.ಸ.ಉ= ಅಸಮರ್ಪಕವಾಗಿಉತ್ತರಿಸಿದಚರು)

## *ಪುರುಷ ಪಾಲಕರಿಗೆ ನಡೆಸಿದ ಸಂದರ್ಶನದ ವಿವರ*

ಕೋಷ್ಟಕ ಸಂಖ್ಯೆ: ೩

| ಪ್ರ.ಸಂ | ಸಮರ್ಪಕವಾಗಿ ಉತ್ತರಿಸಿದವರು | ಅಸಮರ್ಪಕವಾಗಿ ಉತ್ತರಿಸಿದವರು | ಶೇಕಡಾ | | ಶರಾ |
|---|---|---|---|---|---|
| | | | ಸ.ಉ | ಅ.ಸ.ಉ | |
| ೧೦ | ೧೦ | – | ೧೦೦ | – | |
| ೦೨ | ೧೦ | – | ೧೦೦ | – | |
| ೦೩ | ೧೦ | – | ೧೦೦ | – | |
| ೦೪ | ೧೦ | – | ೧೦೦ | – | |
| ೦೫ | ೨ | ೮ | ೨೦ | ೮೦ | |
| ೦೬ | ೧ | ೯ | ೧೦ | ೯೦ | |
| ೦೭ | ೧೦ | – | ೧೦೦ | – | |
| ೦೮ | ೧೦ | – | ೧೦೦ | – | |
| ೦೯ | ೧೦ | –– | ೧೦೦ | – | |
| ೧೦ | ೧೦ | – | ೧೦೦ | – | |
| ೧೧ | ೧೦ | –– | ೧೦೦ | – | |
| ೧೨ | ೧೦ | – | ೧೦೦ | – | |

ಆಧಾರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.

(ಸ.ಉ= ಸಮರ್ಪಕವಾಗಿ ಉತ್ತರಿಸಿದವರು)(ಅ.ಸ.ಉ= ಅಸಮರ್ಪಕವಾಗಿಉತ್ತರಿಸಿದಚರು)

## *ಮಹಿಳಾ ಪಾಲಕರಿಗೆ ನಡೆಸಿದ ಸಂದರ್ಶನದ ವಿವರ*

ಕೋಷ್ಟಕ ಸಂಖ್ಯೆ: ೪

| ಪ್ರ.ಸಂ | ಸಮರ್ಪಕವಾಗಿ ಉತ್ತರಿಸಿದವರು | ಅಸಮರ್ಪಕವಾಗಿ ಉತ್ತರಿಸಿದವರು | ಶೇಕಡಾ ಸ.ಉ | ಶೇಕಡಾ ಅ.ಸ.ಉ | ಶರಾ |
|---|---|---|---|---|---|
| ೧೦ | ೦೯ | ೧ | ೯೦ | ೧೦ | |
| ೦೨ | ೧೦ | – | ೧೦೦ | – | |
| ೦೩ | ೧೦ | – | ೧೦೦ | – | |
| ೦೪ | ೧೦ | – | ೧೦೦ | – | |
| ೦೫ | ೦೧ | ೯ | ೧೦ | ೯೦ | |
| ೦೬ | ೦೧ | ೯ | ೧೦ | ೯೦ | |
| ೦೭ | ೧೦ | – | ೧೦೦ | – | |
| ೦೮ | ೧೦ | – | ೧೦೦ | – | |
| ೦೯ | ೧೦ | – | ೧೦೦ | – | |
| ೧೦ | ೧೦ | – | ೧೦೦ | – | |
| ೧೧ | ೧೦ | – | ೧೦೦ | – | |
| ೧೨ | ೧೦ | – | ೧೦೦ | – | |

ಆಧಾರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.

(ಸ.ಉ= ಸಮರ್ಪಕವಾಗಿ ಉತ್ತರಿಸಿದವರು)(ಅ.ಸ.ಉ= ಅಸಮರ್ಪಕವಾಗಿಉತ್ತರಿಸಿದಚರು)

## ವಿದ್ಯಾರ್ಥಿಗಳಿಗೆ ನಡೆಸಿದ ಸಂದರ್ಶನದ ವಿವರ

ಕೋಷ್ಟಕ ಸಂಖ್ಯೆ: ೫

| ಪ್ರ.ಸಂ | ಸಮರ್ಪಕವಾಗಿ ಉತ್ತರಿಸಿದವರು | ಅಸಮರ್ಪಕವಾಗಿ ಉತ್ತರಿಸಿದವರು | ಶೇಕಡಾ | | ಶರಾ |
|---|---|---|---|---|---|
| | | | ಸ.ಉ | ಅ.ಸ.ಉ | |
| ೧೦ | ೧ | ೯ | ೧೦೦ | – | |
| ೦೨ | ೧ | ೯ | ೧೦೦ | – | |
| ೦೩ | ೧ | ೯ | ೧೦೦ | – | |
| ೦೪ | ೧ | ೯ | ೧೦೦ | – | |
| ೦೫ | ೧ | ೯ | ೧೦೦ | – | |
| ೦೬ | ೧ | ೯ | ೧೦೦ | – | |
| ೦೭ | ೨ | ೮ | ೨೦ | ೮೦ | |
| ೦೮ | ೧ | ೯ | ೧೦ | ೯೦ | |

ಆಧಾರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.

(ಸ.ಉ= ಸಮರ್ಪಕವಾಗಿ ಉತ್ತರಿಸಿದವರು)(ಅ.ಸ.ಉ= ಅಸಮರ್ಪಕವಾಗಿಉತ್ತರಿಸಿದಚರು)

## ವಿದ್ಯಾರ್ಥಿನಿಯರಿಗೆ ನಡೆಸಿದ ಸಂದರ್ಶನದ ವಿವರ

ಕೋಷ್ಟಕ ಸಂಖ್ಯೆ: ೬

| ಪ್ರಸಂ | ಸಮರ್ಪಕವಾಗಿ ಉತ್ತರಿಸಿದವರು | ಅಸಮರ್ಪಕವಾಗಿ ಉತ್ತರಿಸಿದವರು | ಶೇಕಡಾ | | ಶರಾ |
|---|---|---|---|---|---|
| | | | ಸ.ಉ | ಅ.ಸ.ಉ | |
| ೧೦ | ೩ | ೭ | ೩೦ | ೭೦ | |
| ೦೨ | ೩ | ೭ | ೩೦ | ೭೦ | |
| ೦೩ | ೩ | ೭ | ೩೦ | ೭೦ | |
| ೦೪ | ೩ | ೭ | ೩೦ | ೭೦ | |
| ೦೫ | ೩ | ೭ | ೩೦ | ೭೦ | |
| ೦೬ | ೩ | ೭ | ೩೦ | ೭೦ | |
| ೦೭ | ೩ | ೭ | ೩೦ | ೭೦ | |
| ೦೮ | ೩ | ೭ | ೩೦ | ೭೦ | |

ಆಧಾರ: ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಮಾಹಿತಿ.
(ಸ.ಉ= ಸಮರ್ಪಕವಾಗಿ ಉತ್ತರಿಸಿದವರು)(ಅ.ಸ.ಉ= ಅಸಮರ್ಪಕವಾಗಿಉತ್ತರಿಸಿದಚರು)

## ೩.ವಿಶ್ಲೇಷಣೆ

### ೧.ಶಾಲಾ ಸಿಬ್ಬಂದಿಯರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ

ಶಾಲಾ ಸಿಬ್ಬಂದಿಯವರಿಗೆ ಕೇಳಲಾದ ಪ್ರಶ್ನೆಗಳ ವಿಶ್ಲೇಷಣೆ ಈ ರೀತಿಯಾಗಿದೆ. ಶಾಲೆಯ ಎಲ್ಲ ೭ ಜನ ಶಿಕ್ಷಕ ಸಿಬ್ಬಂದಿಯವರು ಇದರಲ್ಲಿ ಪಾಲ್ಗೊಂಡಿರುವರು.

ಪ್ರ ೧] ಈ ಶಾಲೆಯಲ್ಲಿ ಎಸ್.ಡಿ.ಎಮ್.ಸಿ. ರಚನೆಯಾಗಿದೆಯೇ?
ಉ :– ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ ***ಎಲ್ಲರೂ ರಚನೆಯಾಗಿದೆ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೨] ಎಸ್.ಡಿ.ಎಮ್.ಸಿ. ಸದಸ್ಯರ ಸಂಖ್ಯೆ ಎಷ್ಟು?
ಉ :– ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ ಎಲ್ಲರೂ *೧೯ ಜನ* ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.



ಪ್ರ ೩] ಎಸ್.ಡಿ.ಎಮ್.ಸಿ.ಯು ಸರಿಯಾಗಿ ಕಾರ್ಯ ನಿರ್ವಹಿಸುತ್ತಿದೆಯೇ?
ಉ :– ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ ***ಎಲ್ಲರೂ ಸರಿಯಾಗಿ ನಿರ್ವಹಿಸುತ್ತಿದೆ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೪] ಎಸ್.ಡಿ.ಎಮ್.ಸಿ. ಸದಸ್ಯರಿಂದ ದೈನಂದಿನ ಚಟುವಟಿಕೆಗಳಲ್ಲಿ ಹಸ್ತಕ್ಷೇಪವಿದೆಯೇ ?
ಉ :– ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ **ಎಲ್ಲರೂ ಹಸ್ತಕ್ಷೇಪವಿಲ್ಲ** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೫] ಎಸ್.ಡಿ.ಎಮ್.ಸಿ. ಸ್ಥಾಪನೆಯಿಂದ ನಿಮ್ಮ ಶಾಲೆಗೆ ಉಪಯೋಗವಾಗಿದೆಯೇ?
ಉ :– ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ ***ಎಲ್ಲರೂ ಎಸ್.ಡಿ.ಎಮ್.ಸಿ. ಸ್ಥಾಪನೆಯಿಂದ ನಮ್ಮ ಶಾಲೆಗೆ ಉಪಯೋಗವಾಗಿದೆ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೬] ಎಸ್.ಡಿ.ಎಮ್.ಸಿ. ಯಿಂದ ನಿಮ್ಮ ಶಾಲೆಗೆ ಆದ ಪ್ರಯೋಜನಗಳೇನು?
ಉ :– ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ ಎಲ್ಲರೂ ***ಸಮರ್ಪಕವಾಗಿ ಪ್ರಯೋಜನಗಳಾಗಿರುವ ಬಗ್ಗೆ*** (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೭] ಎಸ್.ಡಿ.ಎಮ್.ಸಿ. ಸಭೆಗೆ ಎಲ್ಲ ಸದಸ್ಯರು ಆಸಕ್ತಿಯಿಂದ ಭಾಗವಹಿಸುತ್ತಾರೆಯೇ?

ಉ :- ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ *ಎಸ್.ಡಿ.ಎಮ್.ಸಿ. ಸಭೆಗೆ ಎಲ್ಲ ಸದಸ್ಯರು ಆಸಕ್ತಿಯಿಂದ ಭಾಗವಹಿಸುತ್ತಾರೆ* ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೮] ಎಸ್.ಡಿ.ಎಮ್.ಸಿ. ಸದಸ್ಯರು ಶಾಲಾ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರೀಯಾಗಿ ಪಾಲ್ಗೊಳ್ಳುತ್ತಾರೆಯೇ?

ಉ :- ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ *ಎಸ್.ಡಿ.ಎಮ್.ಸಿ. ಯ ಎಲ್ಲ ಸದಸ್ಯರು ಶಾಲಾ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರೀಯಾಗಿ ಪಾಲ್ಗೊಳ್ಳುತ್ತಾರೆ* ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೯] ಎಸ್.ಡಿ.ಎಮ್.ಸಿ.ಯವರು ಸರ್ಕಾರಿ ಅನುದಾನಗಳನ್ನು ಸದ್ಬಳಕೆ ಮಾಡಿಕೊಳ್ಳುತ್ತಾರೆಯೇ?

ಉ :- ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ *ಎಲ್ಲರೂ ಎಸ್.ಡಿ.ಎಮ್.ಸಿ.ಯವರು ಸರ್ಕಾರಿ ಅನುದಾನಗಳನ್ನು ಸದ್ಬಳಕೆ ಮಾಡಿಕೊಳ್ಳುತ್ತಾರೆ* ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೦] ಎಸ್.ಡಿ.ಎಮ್.ಸಿ. ಯಿಂದ ಶಾಲಾ ಅಭಿವೃದ್ಧಿಗೆ ಆದ ಭೌತಿಕ ಸೌಲಭ್ಯಗಳೇನು?

ಉ :- ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ *ಎಸ್.ಡಿ.ಎಮ್.ಸಿ. ಯಿಂದ ಶಾಲಾ ಅಭಿವೃದ್ಧಿಗೆ ಭೌತಿಕ ಸೌಲಭ್ಯಗಳು ಆಗಿರುವ ಕುರಿತುಅತ್ಯಂತ ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೧] ಎಸ್.ಡಿ.ಎಮ್.ಸಿ. ಸದಸ್ಯರು ಮತ್ತು ಶಾಲಾ ಸಿಬ್ಬಂದಿಗಳ ನಡುವೆ ಹೊಂದಾಣಿಕೆ ಇದೆಯೇ?

ಉ :- ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ *ಎಲ್ಲರೂ ಎಸ್.ಡಿ.ಎಮ್.ಸಿ. ಸದಸ್ಯರು ಮತ್ತು ಶಾಲಾ ಸಿಬ್ಬಂದಿಗಳ ನಡುವೆ ಹೊಂದಾಣಿಕೆ ಇದೆ* ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೨] ನಿಮ್ಮ ಎಸ್.ಡಿ.ಎಮ್.ಸಿ.ಯಲ್ಲಿ ರಾಜಕೀಯ ಪ್ರಭಾವ ಇದೆಯೇ?

ಉ :- ಈ ಪ್ರಶ್ನೆಯನ್ನು ಶಾಲೆಯ ಒಟ್ಟು ೭ ಜನ ಶಿಕ್ಷಕರಿಗೆ ಕೇಳಲಾಗಿ *ಎಸ್.ಡಿ.ಎಮ್.ಸಿ. ಯಲ್ಲಿ ರಾಜಕೀಯ ಪ್ರಭಾವ ಇಲ್ಲವೇ ಇಲ್ಲ* ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

## II.ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ

ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾದ ಪ್ರಶ್ನೆಗಳ ವಿಶ್ಲೇಷಣೆ ಈ ರೀತಿಯಾಗಿದೆ. ಶಾಲೆಯ ಎಲ್ಲ ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರು ಇದರಲ್ಲಿ ಪಾಲ್ಗೊಂಡಿರುವರು.

ಪ್ರ ೧] ಎಸ್.ಡಿ.ಎಮ್.ಸಿ. ಎಂದರೇನು?
ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಗೊತ್ತಿದೆ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೨] ಎಸ್.ಡಿ.ಎಮ್.ಸಿ. ಸದಸ್ಯರಾಗಿ ಮುಂದುವರೆಯಲು ತಮಗೆ ಆಸಕ್ತಿ ಇದೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ತಮಗೆ ಆಸಕ್ತಿ ಇದೆ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೩] ಎಸ್.ಡಿ.ಎಮ್.ಸಿ. ಸದಸ್ಯರಾಗಿ ತಾವು ಶಾಲಾ ಅಭಿವೃದ್ದಿಗೆ ಯಾವ ರೀತಿ ಕಾರ್ಯ ನಿರ್ವಹಿಸುತ್ತಿದ್ದಿರಿ?
ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ತಾವು ತನು ಮನ ಧನದಿಂದ ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ*** (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೪] ಕಲಿಕಾ ಗುಣಮಟ್ಟ ಸುಧಾರಿಸಲು ಹೇಗೆ ಮೇಲ್ವಿಚಾರಣೆ ಮಾಡುತ್ತೀರಿ?
ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಸಮರ್ಪಕವಾಗಿ*** (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೫] ಇಲ್ಲಿಯವರೆಗೆ ಶಾಲಾ ಅಭಿವೃದ್ದಿಗೆ ತಮ್ಮಿಂದಾದ ಕೊಡುಗೆಗಳೇನು?
ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಅವರು ನೀಡಿದ ಕೊಡುಗೆಳ ಬಗ್ಗೆ*** (೧೦೦% ಕ್ಕೆ ೮೯%)ಉತ್ತರ ನೀಡಿದರು.

ಪ್ರ ೬] ನಿಮ್ಮ ಎಸ್.ಡಿ.ಎಮ್.ಸಿ. ರಚನೆಯಿಂದ ಶಾಲಾ ಅಭಿವೃದ್ಧಿ ಎನಿಸಿದೆಯೇ?
ಉ :- :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಸಮರ್ಪಕವಾಗಿ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೭] ಶಾಲಾ ಅಭಿವೃದ್ಧಿಗಾಗಿ ಇನ್ನುಮುಂದೆ ತಾವು ಕೈಗೊಳ್ಳಬಹುದಾದ ಯೋಜನೆಗಳೇನು?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ೧೯ ಜನ ಸದಸ್ಯರು ***ಸಮರ್ಪಕವಾಗಿ*** (೧೦೦% ಕ್ಕೆ ೯೫%) ಉತ್ತರ ನೀಡಿದರು.

ಪ್ರ ೮] ಕಲಿಕಾಗುಣಮಟ್ಟ ಹೆಚ್ಚಿಸಲು ತಮ್ಮ ಸಲಹೆಗಳೇನು?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ೧೯ ಜನ ಸದಸ್ಯರು ***ತಮ್ಮ ಸಲಹೆಗಳನ್ನು*** (೧೦೦% ಕ್ಕೆ ೮೯%) ನೀಡಿದರು.

ಪ್ರ ೯] ಎಸ್.ಡಿ.ಎಮ್.ಸಿ. ಸದಸ್ಯರಾದ ತಮಗೆಲ್ಲಾ ಸರ್ಕಾರದಿಂದ ತರಬೇತಿಗಳಾಗಿವೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ತಮಗೆ ತರಬೇತಿಗಳಾದ ಬಗ್ಗೆ*** (೧೦೦% ಕ್ಕೆ ೯೫%)ಉತ್ತರ ನೀಡಿದರು.

ಪ್ರ ೧೦] ಎಸ್.ಡಿ.ಎಮ್.ಸಿ.ಯಲ್ಲಿ ಏನಾದರೂ ಬದಲಾವಣೆಗಳನ್ನು ಬಯಸಿದ್ದೀರಾ?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಸಮರ್ಪಕವಾಗಿ*** (೧೦೦% ಕ್ಕೆ ೯೫%) ಉತ್ತರ ನೀಡಿದರು.

ಪ್ರ ೧೧] ಎಸ್.ಡಿ.ಎಮ್.ಸಿ. ಯೊಂದಿಗೆ ಮೇಲಾಧಿಕಾರಿಗಳ ಸ್ಪಂದನೆ ಹೇಗಿದೆ?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಅಷ್ಟೊಂದು ಸಮರ್ಪಕವಾಗಿ*** (೧೦೦% ಕ್ಕೆ ೮೪%) ಉತ್ತರ ನೀಡಲಿಲ್ಲ.

ಪ್ರ ೧೨] ಸರ್ಕಾರದಿಂದ ಬಂದ ಎಲ್ಲ ಸೌಲಭ್ಯಗಳ/ ಅನುದಾನಗಳ ಸದ್ಬಳಕೆ ಆಗಿದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಸದ್ಬಳಕೆ ಆಗಿದೆ*** ಎಂಬ (೧೦೦% ಕ್ಕೆ ೯೫%) ಉತ್ತರ ನೀಡಿದರು.

ಪ್ರ ೧೩] ಒಟ್ಟಾರೆ ಎಸ್.ಡಿ.ಎಮ್.ಸಿ.ಯ ಕುರಿತು ತಮ್ಮ ಅಭಿಪ್ರಾಯವೇನು?

ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ಸಮರ್ಪಕವಾಗಿ*** (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೪] ಎಸ್.ಡಿ.ಎಮ್.ಸಿ. ಕಾರ್ಯ ತಮಗೆ ತೃಪ್ತಿದಾಯಕವೆನಿಸಿದೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೯ ಜನ ಎಸ್.ಡಿ.ಎಮ್.ಸಿ. ಸದಸ್ಯರಿಗೆ ಕೇಳಲಾಗಿ ಎಲ್ಲ ೧೯ ಜನ ಸದಸ್ಯರು ***ತೃಪ್ತಿದಾಯಕವಾದ*** (೧೦೦% ಕ್ಕೆ ೧೦೦%) ಉತ್ತರ ನೀಡಿದರು.

### III.*ಪುರುಷ ಪಾಲಕರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ*

ಪುರುಷ ಪಾಲಕರಿಗೆ ಕೇಳಲಾದ ಪ್ರಶ್ನೆಗಳ ವಿಶ್ಲೇಷಣೆ ಈ ರೀತಿಯಾಗಿದೆ. ಎಲ್ಲ ೧೦ ಜನ ಪುರುಷ ಪಾಲಕರು ಇದರಲ್ಲಿ ಪಾಲ್ಗೊಂಡಿರುವರು.

ಪ್ರ ೧] ನೀವು ನಿಮ್ಮ ಮಕ್ಕಳ ಕಲಿಕೆ ಗಮನಿಸಲು ಮೇಲಿಂದ ಮೇಲೆ ಶಾಲೆಗೆ ಭೇಟಿ ಕೊಡುತ್ತೀರಾ?

ಉ : ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು ***ನಮ್ಮ ಮಕ್ಕಳ ಕಲಿಕೆ ಗಮನಿಸಲು ಮೇಲಿಂದ ಮೇಲೆ ಶಾಲೆಗೆ ಭೇಟಿ ಕೊಡುತ್ತೇವೆ*** ಎಂಬ (೧೦೦% ಕ್ಕೆ೧೦೦%) ಉತ್ತರ ನೀಡಿದರು.

ಪ್ರ ೨] ನಿಮ್ಮ ಮಗುವಿನ ಕಲಿಕೆಯಲ್ಲಿ ಎಸ್.ಡಿ.ಎಮ್.ಸಿ. ಸರಿಯಾಗಿ ಕಾರ್ಯನಿರ್ವಹಿಸುತ್ತಿದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು ***ನಮ್ಮ ಮಗುವಿನ ಕಲಿಕೆಯಲ್ಲಿ ಎಸ್.ಡಿ.ಎಮ್.ಸಿ. ಸರಿಯಾಗಿ ಕಾರ್ಯನಿರ್ವಹಿಸುತ್ತಿದೆ*** ಎಂಬ(೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೩] ಎಸ್.ಡಿ.ಎಮ್.ಸಿ. ಮತ್ತು ಶಾಲಾ ಸಿಬ್ಬಂದಿ ನಡುವೆ ಹೊಂದಾಣಿಕೆ ಇದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು ***ಹೊಂದಾಣಿಕೆ ಇದೆ*** ಎಂಬ (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೪] ಶಾಲಾ ಅಭಿವೃದ್ಧಿಗೆ ಎಸ್.ಡಿ.ಎಮ್.ಸಿ. ಮೂಲಕ ಪಾಲಕರಾಗಿ ತಾವು ಹೇಗೆ ಸಹಾಯ ಮಾಡುವಿರಿ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು ***ಸಮರ್ಪಕವಾಗಿ*** (೧೦೦% ಕ್ಕೆ ೧೦೦%) ಸರಿಯಾಗಿ ಉತ್ತರ ನೀಡಿದರು.

ಪ್ರ ೫] ಶಾಲಾ ಕಾರ್ಯಕ್ರಮಗಳಲ್ಲಿ ಎಸ್.ಡಿ.ಎಮ್.ಸಿ. ಜೊತೆಗೆ ತಾವು ಭಾಗವಹಿಸುತ್ತೀರಾ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು ***ಅಸಮರ್ಪಕವಾಗಿ*** (೧೦೦% ಕ್ಕೆ ೨೦%) ಉತ್ತರ ನೀಡಿದರು.

ಪ್ರ ೬] ನಿಮ್ಮ ಮಕ್ಕಳ ಕಲಿಕೆ ಹೆಚ್ಚಿಸಲು ನಿಮ್ಮ ಸಲಹೆಗಳೇನು?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು ***ಅಸಮರ್ಪಕವಾಗಿ*** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೭] ಸದ್ಯ ಕಾರ್ಯ ನಿರ್ವಹಿಸುತ್ತಿರುವ ಎಸ್.ಡಿ.ಎಮ್.ಸಿ.ಯಲ್ಲಿ ಬದಲಾವಣೆ ಬಯಸಿದ್ದೀರಾ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%)ಉತ್ತರ ನೀಡಿದರು.

ಪ್ರ ೮] ನೀವು ಆಯ್ಕೆ ಮಾಡಿದ ಎಸ್.ಡಿ.ಎಮ್.ಸಿ. ಯಿಂದ ಶಾಲಾ ಅಭಿವೃದ್ಧಿಯಲ್ಲಿ ಬದಲಾವಣೆ ಎನಿಸಿದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಎಂಬ ಉತ್ತರ ನೀಡಿದರು.

ಪ್ರ ೯] ನಿಮ್ಮ ಶಾಲೆಯ ಎಸ್.ಡಿ.ಎಮ್.ಸಿ.ಯು ಬೇರೆ ಶಾಲೆಗಳ ಎಸ್.ಡಿ.ಎಮ್.ಸಿ. ಗಳಿಗಿಂತ ಹೇಗೆ ಭಿನ್ನವೆನಿಸಿದೆ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೦] ಎಸ್.ಡಿ.ಎಮ್.ಸಿ. ಕಾರ್ಯನಿರ್ವಹಣೆಯಲ್ಲಿ ತಮಗೂ ಸಲಹೆಗಳನ್ನು ನೀಡಲು ಅವಕಾಶ ಇದೆಯಾ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೧] ನಿಮ್ಮ ಶಾಲೆಯ ಎಸ್.ಡಿ.ಎಮ್.ಸಿ. ಯಿಂದ ನಿಮ್ಮ ಮಕ್ಕಳ ಕಲಿಕಾ ಗುಣಮಟ್ಟ ಹೆಚ್ಚಿದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೨] ಒಟ್ಟಾರೆಯಾಗಿ ನಿಮ್ಮ ಮಕ್ಕಳ ಕಲಿಕೆ ಹಾಗೂ ಶಾಲಾ ಅಭಿವೃದ್ಧಿಯಲ್ಲಿ ಎಸ್.ಡಿ.ಎಮ್.ಸಿ.ಯ ಪಾತ್ರದ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಪುರುಷ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಪುರುಷ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

## IV. *ಮಹಿಳಾ ಪಾಲಕರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ*

ಮಹಿಳಾ ಪಾಲಕರಿಗೆ ಕೇಳಲಾದ ಪ್ರಶ್ನೆಗಳ ವಿಶ್ಲೇಷಣೆ ಈ ರೀತಿಯಾಗಿದೆ. ಈ ಎಲ್ಲ ೧೦ ಜನ ಮಹಿಳಾ ಪಾಲಕರು ಇದರಲ್ಲಿ ಪಾಲ್ಗೊಂಡಿರುವರು.

ಪ್ರ ೧] ನೀವು ನಿಮ್ಮ ಮಕ್ಕಳ ಕಲಿಕೆ ಗಮನಿಸಲು ಮೇಲಿಂದ ಮೇಲೆ ಶಾಲೆಗೆ ಭೇಟಿ ಕೊಡುತ್ತೀರಾ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಮಹಿಳಾ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೯೦%) ಉತ್ತರ ನೀಡಿದರು.

ಪ್ರ ೨] ನಿಮ್ಮ ಮಗುವಿನ ಕಲಿಕೆಯಲ್ಲಿ ಎಸ್.ಡಿ.ಎಮ್.ಸಿ. ಸರಿಯಾಗಿ ಕಾರ್ಯನಿರ್ವಹಿಸುತ್ತಿದೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಮಹಿಳಾ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೩] ಎಸ್.ಡಿ.ಎಮ್.ಸಿ. ಮತ್ತು ಶಾಲಾ ಸಿಬ್ಬಂದಿ ನಡುವೆ ಹೊಂದಾಣಿಕೆ ಇದೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಮಹಿಳಾ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೪] ಶಾಲಾ ಅಭಿವೃದ್ಧಿಗೆ ಎಸ್.ಡಿ.ಎಮ್.ಸಿ. ಮೂಲಕ ಪಾಲಕರಾಗಿ ತಾವು ಹೇಗೆ ಸಹಾಯ ಮಾಡುವಿರಿ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಮಹಿಳಾ ಪಾಲಕರು *ಸಮರ್ಪಕವಾಗಿ* (೧೦೦% ಕ್ಕೆ ೯೦%) ಉತ್ತರ ನೀಡಿದರು.

ಪ್ರ ೫] ಶಾಲಾ ಕಾರ್ಯಕ್ರಮಗಳಲ್ಲಿ ಎಸ್.ಡಿ.ಎಮ್.ಸಿ. ಜೊತೆಗೆ ತಾವು ಭಾಗವಹಿಸುತ್ತೀರಾ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಮಹಿಳಾ ಪಾಲಕರು *ಅಸಮರ್ಪಕವಾಗಿ* (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೬] ನಿಮ್ಮ ಮಕ್ಕಳ ಕಲಿಕೆ ಹೆಚ್ಚಿಸಲು ನಿಮ್ಮ ಸಲಹೆಗಳೇನು?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ ಎಲ್ಲ ೧೦ ಜನ ಮಹಿಳಾ ಪಾಲಕರು *ಅಸಮರ್ಪಕವಾಗಿ* (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೭] ಸದ್ಯ ಕಾರ್ಯ ನಿರ್ವಹಿಸುತ್ತಿರುವ ಎಸ್.ಡಿ.ಎಮ್.ಸಿ.ಯಲ್ಲಿ
ಬದಲಾವಣೆ ಬಯಸಿದ್ದೀರಾ?

ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ
ಎಲ್ಲ ೧೦ ಜನ ಮಹಿಳಾ ಪಾಲಕರು ***ಸಮರ್ಪಕವಾಗಿ***
(೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೮] ನೀವು ಆಯ್ಕೆ ಮಾಡಿದ ಎಸ್.ಡಿ.ಎಮ್.ಸಿ. ಯಿಂದ ಶಾಲಾ
ಅಭಿವೃದ್ಧಿಯಲ್ಲಿ ಬದಲಾವಣೆ ಎನಿಸಿದೆಯೇ?

ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ
ಎಲ್ಲ ೧೦ ಜನ ಮಹಿಳಾ ಪಾಲಕರು ***ಸಮರ್ಪಕವಾಗಿ***
(೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೯] ನಿಮ್ಮ ಶಾಲೆಯ ಎಸ್.ಡಿ.ಎಮ್.ಸಿ.ಯು ಬೇರೆ ಶಾಲೆಗಳ
ಎಸ್.ಡಿ.ಎಮ್.ಸಿ. ಗಳಿಗಿಂತ ಹೇಗೆ ಭಿನ್ನವೆನಿಸಿದೆ?

ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ
ಎಲ್ಲ ೧೦ ಜನ ಮಹಿಳಾ ಪಾಲಕರು ***ಸಮರ್ಪಕವಾಗಿ***
(೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೦] ಎಸ್.ಡಿ.ಎಮ್.ಸಿ. ಕಾರ್ಯನಿರ್ವಹಣೆಯಲ್ಲಿ ತಮಗೂ
ಸಲಹೆಗಳನ್ನು ನೀಡಲು ಅವಕಾಶ ಇದೆಯಾ?

ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ
ಎಲ್ಲ ೧೦ ಜನ ಮಹಿಳಾ ಪಾಲಕರು ***ಸಮರ್ಪಕವಾಗಿ***
(೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೧] ನಿಮ್ಮ ಶಾಲೆಯ ಎಸ್.ಡಿ.ಎಮ್.ಸಿ. ಯಿಂದ ನಿಮ್ಮ ಮಕ್ಕಳ ಕಲಿಕಾ
ಗುಣಮಟ್ಟ ಹೆಚ್ಚಿದೆಯೇ?

ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ
ಎಲ್ಲ ೧೦ ಜನ ಮಹಿಳಾ ಪಾಲಕರು ***ಸಮರ್ಪಕವಾಗಿ***
(೧೦೦% ಕ್ಕೆ ೧೦೦%) ಉತ್ತರ ನೀಡಿದರು.

ಪ್ರ ೧೨] ಒಟ್ಟಾರೆಯಾಗಿ ನಿಮ್ಮ ಮಕ್ಕಳ ಕಲಿಕೆ ಹಾಗೂ ಶಾಲಾ
ಅಭಿವೃದ್ಧಿಯಲ್ಲಿ ಎಸ್.ಡಿ.ಎಮ್.ಸಿ.ಯ ಪಾತ್ರದ ಬಗ್ಗೆ ನಿಮ್ಮ
ಅಭಿಪ್ರಾಯವೇನು?

ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ಮಹಿಳಾ ಪಾಲಕರಿಗೆ ಕೇಳಲಾಗಿ
ಎಲ್ಲ ೧೦ ಜನ ಮಹಿಳಾ ಪಾಲಕರು ***ಸಮರ್ಪಕವಾಗಿ***
(೧೦೦% ಕ್ಕೆ ೧೦೦%) ಉತ್ತರ ನೀಡಿದರು.

## V.ವಿದ್ಯಾರ್ಥಿಗಳಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ

ವಿದ್ಯಾರ್ಥಿಗಳಿಗೆ ಕೇಳಲಾದ ಪ್ರಶ್ನೆಗಳ ವಿಶ್ಲೇಷಣೆ ಈ ರೀತಿಯಾಗಿದೆ. ಎಲ್ಲ ೧೦ ಜನ ವಿದ್ಯಾರ್ಥಿಗಳು ಇದರಲ್ಲಿ ಪಾಲ್ಗೊಂಡಿರುವರು.

ಪ್ರ ೧] ನಿಮ್ಮ ಶಾಲೆಯಲ್ಲಿ ಎಸ್.ಡಿ.ಎಮ್.ಸಿ. ಇದೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೨] ಎಸ್.ಡಿ.ಎಮ್.ಸಿ.ಯ ಅಧ್ಯಕ್ಷರು ಮತ್ತು ಸದಸ್ಯರು ಯಾರು ಯಾರು?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೩] ನಿಮ್ಮ ಶಾಲಾ ಚಟುವಟಿಕೆಗಳಲ್ಲಿ ಎಸ್.ಡಿ.ಎಮ್.ಸಿ.ಯವರು ಭಾಗವಹಿಸುತ್ತಾರೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೪] ಎಸ್.ಡಿ.ಎಮ್.ಸಿ.ಯವರು ಸರಿಯಾಗಿ ಕಾರ್ಯ ನಿರ್ವಹಿಸುತ್ತಿರುವರೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೫] ನಿಮ್ಮ ಕಲಿಕೆಗೆ ಎಸ್.ಡಿ.ಎಮ್.ಸಿ.ಯವರು ಹೇಗೆ ಸಹಾಯ ಮಾಡುತ್ತಾರೆ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೬] ರಾಷ್ಟ್ರೀಯ ಹಬ್ಬಗಳಲ್ಲಿ ಎಸ್.ಡಿ.ಎಮ್.ಸಿ. ಸದಸ್ಯರೆಲ್ಲರೂ ಭಾಗವಹಿಸುತ್ತಾರೆಯೇ?
ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

ಪ್ರ ೭] ಎಸ್.ಡಿ.ಎಮ್.ಸಿ.ಯವರು ನಿಮ್ಮ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಿಗೆ ಹೇಗೆ ಪ್ರೋತ್ಸಾಹ ನೀಡುತ್ತಾರೆ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೨೦%) ಉತ್ತರ ನೀಡಿದರು.

ಪ್ರ ೮] ನಿಮ್ಮಲ್ಲಿ ಎಸ್.ಡಿ.ಎಮ್.ಸಿ. ಕಾರ್ಯ ನಿರ್ವಹಿಸುವುದರ ಬಗ್ಗೆ ನಿಮಗೆ ತೃಪ್ತಿ ಇದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿಗಳಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿಗಳು **ಅಸಮರ್ಪಕವಾಗಿ** (೧೦೦% ಕ್ಕೆ ೧೦%) ಉತ್ತರ ನೀಡಿದರು.

## VI. *ವಿದ್ಯಾರ್ಥಿನಿಯರಿಗೆ ಕೇಳಲಾದ ಪ್ರಶ್ನೋತ್ತರಗಳ ವಿಶ್ಲೇಷಣೆ*

ವಿದ್ಯಾರ್ಥಿನಿಯರಿಗೆ ಕೇಳಲಾದ ಪ್ರಶ್ನೆಗಳ ವಿಶ್ಲೇಷಣೆ ಈ ರೀತಿಯಾಗಿದೆ. ಎಲ್ಲ ೧೦ ಜನ ವಿದ್ಯಾರ್ಥಿನಿಯರು ಇದರಲ್ಲಿ ಪಾಲ್ಗೊಂಡಿರುವರು.

ಪ್ರ ೧] ನಿಮ್ಮ ಶಾಲೆಯಲ್ಲಿ ಎಸ್.ಡಿ.ಎಮ್.ಸಿ. ಇದೆಯೇ?
ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೨] ಎಸ್.ಡಿ.ಎಮ್.ಸಿ.ಯ ಅಧ್ಯಕ್ಷರು ಮತ್ತು ಸದಸ್ಯರು ಯಾರು ಯಾರು?
ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೩] ನಿಮ್ಮ ಶಾಲಾ ಚಟುವಟಿಕೆಗಳಲ್ಲಿ ಎಸ್.ಡಿ.ಎಮ್.ಸಿ.ಯವರು ಭಾಗವಹಿಸುತ್ತಾರೆಯೇ?
ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು ***ಅಸಮರ್ಪಕವಾಗಿ*** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೪] ಎಸ್.ಡಿ.ಎಮ್.ಸಿ.ಯವರು ಸರಿಯಾಗಿ ಕಾರ್ಯ ನಿರ್ವಹಿಸುತ್ತಿರುವರೇ?
ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೫] ನಿಮ್ಮ ಕಲಿಕೆಗೆ ಎಸ್.ಡಿ.ಎಮ್.ಸಿ.ಯವರು ಹೇಗೆ ಸಹಾಯ ಮಾಡುತ್ತಾರೆ?
ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೬] ರಾಷ್ಟ್ರೀಯ ಹಬ್ಬಗಳಲ್ಲಿ ಎಸ್.ಡಿ.ಎಮ್.ಸಿ. ಸದಸ್ಯರೆಲ್ಲರೂ ಭಾಗವಹಿಸುತ್ತಾರೆಯೇ?
ಉ :– ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೭] ಎಸ್.ಡಿ.ಎಮ್.ಸಿ.ಯವರು ನಿಮ್ಮ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಿಗೆ ಹೇಗೆ ಪ್ರೋತ್ಸಾಹ ನೀಡುತ್ತಾರೆ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

ಪ್ರ ೮] ನಿಮ್ಮಲ್ಲಿ ಎಸ್.ಡಿ.ಎಮ್.ಸಿ. ಕಾರ್ಯ ನಿರ್ವಹಿಸುವುದರ ಬಗ್ಗೆ ನಿಮಗೆ ತೃಪ್ತಿ ಇದೆಯೇ?

ಉ :- ಈ ಪ್ರಶ್ನೆಯನ್ನು ಒಟ್ಟು ೧೦ ಜನ ವಿದ್ಯಾರ್ಥಿನಿಯರಿಗೆ ಕೇಳಲಾಗಿ ಎಲ್ಲ ೧೦ ಜನ ವಿದ್ಯಾರ್ಥಿನಿಯರು **ಅಸಮರ್ಪಕವಾಗಿ** (೧೦೦% ಕ್ಕೆ ೩೦%) ಉತ್ತರ ನೀಡಿದರು.

## ೪..ಉಪಸಂಹಾರ

ಕ್ಷೇತ್ರಾಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟದ ಶಾಲಾ ಸಿಬ್ಬಂದಿ, ಎಸ್.ಡಿ.ಎಮ್.ಸಿ. ಸದಸ್ಯರು, ಪುರುಷ ಮತ್ತು ಮಹಿಳಾ ಪಾಲಕರು, ವಿದ್ಯಾರ್ಥಿ/ನಿಯರು ಸಂದರ್ಶನಕ್ಕೆ ಒಳಗೊಂಡಾಗ ವಿಭಿನ್ನ ಪ್ರಶ್ನೆಗಳ ಮೇಲೆ ನೀಡಿದ ಅಭಿಪ್ರಾಯಗಳನ್ನು ಇದು ಒಳಗೊಂಡಿದೆ. ಇವುಗಳನ್ನು ಅವಲೋಕಿಸಿದಾಗ ಎಸ್.ಡಿ.ಎಮ್.ಸಿ. ಯ ಕಾರ್ಯಚಟುವಟಿಕೆಗಳ ಸಮಗ್ರ ದರ್ಶನ ಉಂಟಾಗುತ್ತದೆ. ಈ ರೀತಿಯ ಎಸ್.ಡಿ.ಎಮ್.ಸಿ. ಯ ಕಾರ್ಯಚಟುವಟಿಕೆಗಳಿಂದ ಶಾಲೆಗಳು ಪರಿಪೂರ್ಣವಾಗಿ ಬೆಳೆಯಲು ಸಾಧ್ಯ. ಅವುಗಳಿಗೆ ಜನರು ಮತ್ತು ಸರ್ಕಾರಗಳು, ಇಲಾಖೆಗಳು ಬೆಂಬಲವಾಗಿ ನಿಲ್ಲಬೇಕು. ಈ ಕ್ಷೇತ್ರಾಧ್ಯಯನದ ಆಧಾರದ ಮೇಲೆ ಎಸ್.ಡಿ.ಎಮ್.ಸಿ. ಕಾರ್ಯಚಟುವಟಿಕೆಗಳನ್ನು ಪರಿಪೂರ್ಣವಾಗಿ ಆರ್ಥ ಮಾಡಿಕೊಳ್ಳಲು ಸಹಾಯಕಾರಿಯಾಗಿದೆ.

# ಅಧ್ಯಾಯ-೪

## ಎಸ್.ಡಿ.ಎಮ್.ಸಿ. ಯ ಸಾಫಲ್ಯ-ವೈಫಲ್ಯಗಳ ಸಮೀಕ್ಷೆ

೧.ಪೀಠಿಕೆ

೨.ಸಂದರ್ಶನಾರ್ಥಿಗಳ ವಯಸ್ಸು ಮತ್ತು ಸಾಕ್ಷರತೆ
ಮನ್ನಿಕೇರಿ ತೋಟದ ಎಸ್.ಡಿ.ಎಮ್.ಸಿ.ಯಿಂದಾಗಿರುವ ಪ್ರಯೋಜನಗಳು

I. ಶಿಕ್ಷಕರ ಅಭಿಪ್ರಾಯದ ವಿಶ್ಲೇಷಣೆ

II. ಎಸ್.ಡಿ.ಎಮ್.ಸಿ. ಸದಸ್ಯರ ಅಭಿಪ್ರಾಯದ ವಿಶ್ಲೇಷಣೆ

III. ವಿದ್ಯಾರ್ಥಿಗಳ ಅಭಿಪ್ರಾಯದ ವಿಶ್ಲೇಷಣೆ

IV. ಪಾಲಕರ ಅಭಿಪ್ರಾಯದ ವಿಶ್ಲೇಷಣೆ

೩. ಉಪಸಂಹಾರ

## ೧. ಪೀಠಿಕೆ

ಶಾಲೆಗಳು ರಾಷ್ಟ್ರದ ಅಭಿವೃದ್ಧಿಯ ಪ್ರತೀಕ ಸುಶಿಕ್ಷಿತ ಸಮುದಾಯದ ಗ್ರಾಮ ಮತ್ತು ರಾಷ್ಟ್ರದ ಅಭಿವೃದ್ಧಿ ನಿಂತಿದೆ. ಆದರೆ ಶಾಲೆಗಳ ಅಭಿವೃದ್ಧಿಯಲ್ಲಿ ರಾಷ್ಟ್ರದ ಅಭಿವೃದ್ಧಿ ನಿಂತಿರುವುದರಿಂದ ಸರ್ಕಾರದ ಸಂಘ-ಸಂಸ್ಥೆಗಳ ಜನರ ಸಹಕಾರವನ್ನು ಅವಲಂಬಿಸಿವೆ. ಈ ನಿಟ್ಟಿನಲ್ಲಿ ಸರ್ಕಾರವು ಶಾಲೆಗಳ ಅಭಿವೃದ್ಧಿಗಾಗಿ "ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ" ಪ್ರತಿಯೊಂದು ಶಾಲೆಯಲ್ಲೂ ರಚಿಸಲು ಆದೇಶ ಹೊರಡಿಸಿದ್ದು, ಗಮನಾರ್ಹವಾದ ಅಂಶ. ಇದರಿಂದ ಜನಸಮುದಾಯದ ಬೆಂಬಲ ಆ ಸ್ಥಳೀಯ ಶಾಲೆಗೆ ದೊರೆಯುವದರಿಂದ ಆ ಶಾಲೆಯ ಪ್ರಗತಿಗಾಗಿ ಎಲ್ಲರೂ ಶ್ರಮಿಸಲು ಅನುವು ಮಾಡಿಕೊಟ್ಟಂತಾಗುತ್ತದೆ. ಸರ್ಕಾರವು ಕಾಲ ಕಾಲಕ್ಕೆ ಹಣಕಾಸಿನ ಹಾಗೂ ಇತರ ಸಹಾಯವನ್ನು ಎಸ್.ಡಿ.ಎಮ್.ಸಿ. ಗೆ ಒದಗಿಸಿರುವದರಿಂದ ಹಾಗೇಯೆ ಜನರು ಸಹ ತಮ್ಮ ತನು-ಮನ-ಧನದಿಂದ ಶಾಲೆಗಳಿಗೆ ದುಡಿದಾಗ ಖಂಡಿತವಾಗಿಯೂ ಶಾಲೆಗಳು ಅಭಿವೃದ್ಧಿ ಹೊಂದುತ್ತವೆ. ಈ ದಿಶೆಯಲ್ಲಿ ಎಸ್.ಡಿ.ಎಮ್.ಸಿ. ಗಳ ಪಾತ್ರ ಕುರಿತು ಸಂಶೋಧನೆಯಲ್ಲಿ ಕಂಡುಕೊಂಡ ಅಂಶಗಳ ಆಧಾರದ ಮೇಲೆ ಎಸ್.ಡಿ.ಎಮ್.ಸಿ. ಗಳ ಸಾಫಲ್ಯ-ವೈಫಲ್ಯಗಳ ಕುರಿತು ಚರ್ಚಿಸಲಾಗಿದೆ.

*ಸಂದರ್ಶನಾರ್ಥಿಗಳ ವಯಸ್ಸು ಮತ್ತು ಸಾಕ್ಷರತೆ*

ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಗಳ ಕುರಿತಾಗಿ ಕ್ಷೇತ್ರಾಧ್ಯಯನ ಕೈಗೊಂಡಾಗ ಅಲ್ಲಿ ೩೦ ರಿಂದ ೫೫ ವಯಸ್ಸಿನ ವರೆಗಿನ ಶಾಲಾ ಸಿಬ್ಬಂದಿ, ೨೫ ರಿಂದ ೭೬ ವಯಸ್ಸಿನ ವರೆಗಿನ ಎಸ್.ಡಿ.ಎಮ್.ಸಿ. ಸದಸ್ಯರು, ೯ ರಿಂದ ೧೩ ವಯಸ್ಸಿನ ವಿದ್ಯಾರ್ಥಿ/ನಿಯರು ಹಾಗೂ ೨೫ ರಿಂದ ೫೦ ವಯಸ್ಸಿನ ವರೆಗಿನ  ಮಹಿಳಾ ಮತ್ತು ಪುರುಷ ಪಾಲಕರು ಸಂದರ್ಶನಾರ್ಥಿಗಳಾಗಿದ್ದರು.

ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಗಳ ಸಾಫಲ್ಯ-ವೈಫಲ್ಯಗಳಲ್ಲಿ ಸಾಕ್ಷರತೆ ಪ್ರಮುಖ ಪಾತ್ರವಹಿಸಬಲ್ಲದು. ಎಸ್.ಡಿ.ಎಮ್.ಸಿ. ಸದಸ್ಯರು, ಪಾಲಕರು ಸಾಕ್ಷರರಾಗಿದ್ದರೆ ಸಮಿತಿಯ ದಾಖಲೆ, ಹಣಕಾಸಿನ ನಿರ್ವಹಣೆ ಬಗ್ಗೆ ಸಾಮಾನ್ಯ ತಿಳುವಳಿಕೆಯನ್ನು ಹೊಂದಬಹುದು. ಆದರೆ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚು ಆಧ್ಯತೆ ನೀಡದೆ ಇರುವುದರಿಂದ ಅನಕ್ಷರತೆ ಹೆಚ್ಚಿದೆ. ಪ್ರಸ್ತುತ ಸಂದರ್ಶಣಕ್ಕೆ ಒಳಪಡಿಸಿಕೊಂಡ ಎಸ್.ಡಿ.ಎಮ್.ಸಿ. ಯ ಮಹಿಳಾ ಸದಸ್ಯರಲ್ಲಿ ಮತ್ತು ಪಾಲಕರಲ್ಲಿ ಶಿಕ್ಷಣ ಮಟ್ಟವು ಅಷ್ಟೊಂದು ತೃಪ್ತಿಕರವಾಗಿರಲಿಲ್ಲ. ಕೆಲವು ಮಹಿಳಾ ಪಾಲಕರು ಅನಕ್ಷರಸ್ಥರಾಗಿದ್ದರು.

ಸರ್ಕಾರಿ ಆದೇಶದಂತೆ ಶಾಲೆಗಳ ಅಭಿವೃದ್ಧಿಗಾಗಿ ಹಾಗೂ ಬೆಳವಣಿಗೆಗಾಗಿ ಹುಟ್ಟಿಕೊಂಡ ಸಮಿತಿಯೇ "ಶಾಲಾಭಿವೃದ್ಧಿ ಮತ್ತು

ಮೇಲುಸ್ತುವಾರಿ ಸಮಿತಿ" ಈ ಸಮಿತಿಯ ಹೆಸರಿನಲ್ಲಿಯೇ ಸಮಿತಿಯ ಉದ್ದೇಶ ಸ್ಪಷ್ಟವಾಗಿದೆ. ಅಂದರೆ ಎಸ್.ಡಿ.ಎಮ್.ಸಿ. ಗಳು ಸಂಪೂರ್ಣವಾಗಿ ಶಾಲೆಗಳ ಅಭಿವೃದ್ಧಿಗಾಗಿಯೇ ತೊಡಗಬೇಕು ವಿನಃ ರಾಜಕೀಯ ಮಾಡುವುದಾಗಲಿ ಅಥವಾ ಸದಸ್ಯರುಗಳಲ್ಲಿ ವೈಶಮ್ಯ ಬೆಳೆದರೆ ಸಮಿತಿ ನಿರರ್ಥಕವಾಗುವುದು. ಆದರೆ ಮನ್ನಿಕೇರಿ ತೋಟದ ಶಾಲೆಯ ಎಸ್.ಡಿ.ಎಮ್.ಸಿ.ಯು ಸಂಪೂರ್ಣವಾಗಿ ಶಾಲಾಭಿವೃದ್ಧಿಗೆ ತೊಡಗಿಕೊಂಡಿರುವುದು ಸಂದರ್ಶಣ ಸಮಯದಲ್ಲಿ ಸ್ಪಷ್ಟವಾಯಿತು. ಎಲ್ಲರೂ ತಮ್ಮ ಶ್ರಮ, ತ್ಯಾಗ, ಕೊಡುಗೆ ಹಾಗೂ ಕನಸುಗಳನ್ನು ವ್ಯಕ್ತಪಡಿಸಿದರು. ಇಂತಹ ಅಭಿಪ್ರಾಯ ವ್ಯಕ್ತಪಡಿಸಿದ ಅನೇಕರು ಶಾಲೆಯ ಬಗ್ಗೆ ಮಹೋನ್ನತ ಉದ್ದೇಶಗಳನ್ನು ಇರಿಸಿಕೊಂಡಿದ್ದು ಗೊತ್ತಾಯಿತು.

ಆದರೆ ವಿದ್ಯಾರ್ಥಿ/ನಿಯರನ್ನು ಸಂದರ್ಶಿಸಿದಾಗ ಎಸ್.ಡಿ.ಎಮ್.ಸಿ.ಗಳ ಕಾರ್ಯ ಚಟುವಟಿಕೆಗಳ ಕುರಿತಾದ ಮಾಹಿತಿಯ ಅರಿವು ಅವರಿಗಿರಲಿಲ್ಲ. ೮ ನೇ ತರಗತಿಯ ಒಂದಿಬ್ಬರು ವಿದ್ಯಾರ್ಥಿಗಳು ಮಾತ್ರ ಅರಿವು ಹೊಂದಿದ್ದು ತಿಳಿದು ಬಂದಿತು.

## *ಮನ್ನಿಕೇರಿ ತೋಟದ ಎಸ್.ಡಿ.ಎಮ್.ಸಿ.ಯಿಂದಾಗಿರುವ ಪ್ರಯೋಜನಗಳು*

ನಮ್ಮ ದೇಶವು ಹಳ್ಳಿಗಳ ರಾಷ್ಟ್ರವಾಗಿದ್ದು ಬಡತನ, ನಿರುದ್ಯೋಗ ಅನಕ್ಷರತೆ ಮೊದಲಾದ ಸಮಸ್ಯೆಗಳಿಂದ ಕೂಡಿದೆ. ರಾಷ್ಟ್ರದ ಅಭಿವೃದ್ಧಿಯಾಗಲು ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ ಎಂಬುದು ಸ್ಪಷ್ಟ. ಆದ್ದರಿಂದ ಸರ್ಕಾರಗಳು ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಿ ಎಲ್ಲಾ ಕಡೆಗೂ ಶಾಲೆಗಳನ್ನು ಸ್ಥಾಪಿಸುತ್ತಾರೆ. ಆದರೆ ಶಾಲೆಗಳನ್ನು ಸರಿಯಾಗಿ ಮುನ್ನಡೆಸಬೇಕಾಗಿದ್ದರೆ ಜನರ ಸಹಭಾಗಿತ್ವವು ಅವಶ್ಯವೆಂದರಿತ ಸರ್ಕಾರ ಎಸ್.ಡಿ.ಎಮ್.ಸಿ. ಗಳನ್ನು ರಚಿಸಿತು.

ಎಸ್.ಡಿ.ಎಮ್.ಸಿ. ರಚನೆಯಾದ ನಂತರ ಪ್ರಸ್ತುತ ಶಾಲೆಯನ್ನು ಬಹಳಷ್ಟು ಸುಧಾರಣೆಯನ್ನು ಕಂಡಿದ್ದೇವೆ ಎನ್ನುವುದು ಸಂದರ್ಶಿತ ವ್ಯಕ್ತಿಗಳ ಅಭಿಪ್ರಾಯವಾಗಿದೆ. "ಒಗ್ಗಟ್ಟಿನಲ್ಲಿ ಬಲವಿದೆ" ಎನ್ನುವುದು ಅವರ ಸ್ಪಷ್ಟ ಅಭಿಪ್ರಾಯವಾಗಿದೆ.

### ೧.*ಶಿಕ್ಷಕರ ಅಭಿಪ್ರಾಯದ ವಿಶ್ಲೇಷಣೆ*

ಶಿಕ್ಷಕರನ್ನು ಸಂದರ್ಶಿಸಿದಾಗ ಅವರು ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಯ ಕುರಿತಾಗಿ ಅತ್ಯಂತ ಸ್ಪಷ್ಟ ಅಭಿಪ್ರಾಯ ವ್ಯಕ್ತ ಪಡಿಸಿದರು. ಎಲ್ಲಾ ೭ ಜನ ಶಿಕ್ಷಕರು ಎಸ್.ಡಿ.ಎಮ್.ಸಿ.ಯ ಬಗ್ಗೆ ಪೂರ್ಣ ತಿಳುವಳಿಕೆಯನ್ನು ಹೊಂದಿದವರಾಗಿದ್ದರು. ಎಸ್.ಡಿ.ಎಮ್.ಸಿ. ಸರಿಯಾಗಿ ಕಾರ್ಯ ನಿರ್ವಹಿಸುತ್ತಿರುವುದರ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದರು. ದಿನನಿತ್ಯದ ಶಾಲಾ ಚಟುವಟಿಕೆಗಳಲ್ಲಿ ಎಸ್.ಡಿ.ಎಮ್.ಸಿ. ಸದಸ್ಯರಿಂದ ಅವರಿಗೆ ಕಿರುಕುಳ ಇರಲಿಲ್ಲ

ಎಂಬುದು ಗೊತ್ತಾಯಿತು. ಬದಲಾಗಿ ಎಸ್.ಡಿ.ಎಮ್.ಸಿ. ಸದಸ್ಯರ ಬಗ್ಗೆ ಅವರಿಗೆ ಹೆಮ್ಮೆ ಇತ್ತು. ಎಸ್.ಡಿ.ಎಮ್.ಸಿ. ಸ್ಥಾಪನಾ ಪೂರ್ವದಿಂದಲೂ ಅಲ್ಲಿಯ ಸ್ಥಳೀಯ ಜನರು ಶಾಲೆಯ ಸ್ಥಾಪನೆಯಿಂದ ಹಿಡಿದು ಇಲ್ಲಿಯವರೆಗೂ ದುಡಿಯುತ್ತಿರುವ ಬಗ್ಗೆ ಹೆಮ್ಮೆಯಿಂದ ಹೇಳಿದರು. ಎಸ್.ಡಿ.ಎಮ್.ಸಿ. ಸಭೆಗಳಲ್ಲಿ ಎಲ್ಲಾ ಸದಸ್ಯರು ಆಸಕ್ತಿಯಿಂದ ಭಾಗವಹಿಸಿ ಶಾಲಾಭಿವೃದ್ಧಿ ಕಾರ್ಯಕ್ರಮಗಳ ಚಿಂತನ ಮಾಡಿ, ಬಂದ ಸರ್ಕಾರಿ ಅನುದಾನಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕೈಗೊಳ್ಳಬೇಕಾದ ಕಾರ್ಯಕ್ಕೆ ಹಣಕಾಸಿನ ಸಮಸ್ಯೆ ಉಂಟಾದರೆ ಎಲ್ಲಾ ಎಸ್.ಡಿ.ಎಮ್.ಸಿ. ಸದಸ್ಯರು ವೈಯಕ್ತಿಕವಾಗಿ ಕೊರತೆಯಿರುವಷ್ಟು ಹಣವನ್ನು ಸಂಗ್ರಹಿಸಿ ಶಾಲಾಭಿವೃದ್ಧಿಗಳಲ್ಲಿ ತೊಡಗುತ್ತಾರೆ ಎಂಬುವುದು ಎಲ್ಲ ಶಿಕ್ಷಕರ ಅಭಿಮತವಾಗಿತ್ತು. ಎಸ್.ಡಿ.ಎಮ್.ಸಿ. ಸದಸ್ಯರು ಮತ್ತು ನಮ್ಮ ಶಿಕ್ಷಕರ ನಡುವೆ ಉತ್ತಮ ಬಾಂಧವ್ಯ ಇರುವುದರ ಬಗ್ಗೆ ಸದಭಿಪ್ರಾಯ ವ್ಯಕ್ತಪಡಿಸಿದರು. ತಮ್ಮ ಶಾಲಾ ಎಸ್.ಡಿ.ಎಮ್.ಸಿ. ಯಲ್ಲಿ ರಾಜಕೀಯ ಪ್ರಭಾವದ ಮಾತುಗಳನ್ನು ಒಮ್ಮೆಯೂ ಕೇಳಲಿಲ್ಲ ಎಂಬುವುದನ್ನು ಹೇಳಿದರು.

ಎಸ್.ಡಿ.ಎಮ್.ಸಿ. ಯ ಸ್ಥಾಪನೆಯಿಂದ ಶಾಲಾ ದಾಖಲಾತಿಯಲ್ಲಿ ಗಣನೀಯ ಏರಿಕೆ ಕಂಡು ಬಂದಿದೆ. ಇಲಾಖೆಯ ಅಧಿಕಾರಿಗಳೊಂದಿಗೆ ಸಕಾಲದಲ್ಲಿ ಅಭಿವೃದ್ಧಿ ಪರ ಚರ್ಚೆ ನಡೆಸುವುದರಿಂದ ಶಾಲೆಯು ಯಾವುದೇ ತೊಂದರೆಗಳಿಲ್ಲದೆ ಅಭಾದಿತವಾಗಿ ನಡೆಯುತ್ತಿದೆ ಎಂದು ಸ್ಮರಿಸಿದರು.

ಶಾಲೆಯ ಒಟ್ಟು ೭ಜನ ಶಿಕ್ಷಕರನ್ನು ಸಂದರ್ಶಿಸಿದಾಗ ಅವರ ಎಲ್ಲ ಹೇಳಿಕೆಗಳು ವಾಸ್ತವ ನೆಲೆಗಟ್ಟಿನ ಮೇಲೆ ನಿಂತಿರುವುದು ನನ್ನ ಸಂಶೋಧನೆಯಲ್ಲಿ ಕಂಡು ಕೊಂಡೆ. ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವು ನಿಜವಾದ ಅಭಿಪ್ರಾಯಗಳೇ ಆಗಿದ್ದವು. ಹೀಗಾಗಿ ಶಿಕ್ಷಕರಿಂದ ಸಂಗ್ರಹಿಸಲ್ಪಟ್ಟ ಅಭಿಪ್ರಾಯಗಳು ಎಸ್.ಡಿ.ಎಮ್.ಸಿ. ಸಾಫಲ್ಯ ಹೊಂದಿರುವುದನ್ನು ಕಂಡುಕೊಂಡೆ.

**II.*ಎಸ್.ಡಿ.ಎಮ್.ಸಿ. ಸದಸ್ಯರ ಅಭಿಪ್ರಾಯದ ವಿಶ್ಲೇಷಣೆ***

ಎಲ್ಲ ಸದಸ್ಯರುಗಳಿಗೆ ಎಸ್‌ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಗಳ ಕುರಿತಾದ ಮಾಹಿತಿ ಇತ್ತು. ಸಮಿತಿಯ ಕಾರ್ಯಚಟುವಟಿಕೆಗಳ ಚೌಕಟ್ಟಿನಲ್ಲಿ ಅವರಿಗೆ ಸಮಿತಿಯಲ್ಲಿ ಸದಸ್ಯರಾಗಿ ಕಾರ್ಯನಿರ್ವಹಿಸಲು ಆಸಕ್ತಿ ಇರುವುದನ್ನು ವ್ಯಕ್ತ ಪಡಿಸಿದರು. ಎಸ್.ಡಿ.ಎಮ್.ಸಿ. ಸಮಿತಿಯ ಸದಸ್ಯರಾಗಿ ಶಾಲಾಭಿವೃದ್ಧಿಗೆ ಪಣತೊಟ್ಟು ಶಾಲಾ ಕುಂದು ಕೊರತೆಗಳಿಗೆ ಸಮಿತಿಯಲ್ಲಿ ಚರ್ಚಿಸಿ ಸಾಮೂಹಿಕ ಜವಾಬ್ದಾರಿಯನ್ನು ಹೊತ್ತು ಕಾರ್ಯನಿರ್ವಹಿಸುತ್ತಿರುವುದನ್ನು ತಾವು ಮಾಡಿದ ಸಾಧನೆಗಳನ್ನು ತೋರಿಸುತ್ತ ಧೃಡಪಡಿಸಿದರು.

ಶಾಲೆಯಲ್ಲಿ ಕಲಿಕಾ ಗುಣಮಟ್ಟವನ್ನು ಸುಧಾರಿಸಲು ಮೇಲಿಂದ ಮೇಲೆ ಸಮಿತಿಯ ಕೆಲವು ಸದಸ್ಯರು ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಜೊತೆ ಕಲಿಕೆಯ ಕುರಿತಾಗಿ ಚರ್ಚಿಸುತ್ತಿರುವುದನ್ನು ಹೇಳಿದರು. ಹಾಗೇಯೆ ಕಲಿಕಾ

ಗುಣಮಟ್ಟವನ್ನು ಸುಧಾರಿಸುವ ಸಲುವಾಗಿ ನುರಿತ, ಅನುಭವಿಕ, ಹಿರಿಯ ಶಿಕ್ಷಕರ ಮಾರ್ಗದರ್ಶನ ಪಡೆದುಕೊಂಡು ಮುನ್ನಡೆಯುತ್ತಿರುವುದನ್ನು ವಿವರಿಸಿದರು.

ಒಂದು ಗುಡಿಸಿಲಿನಿಂದ ಆರಂಭವಾದ ಶಾಲೆಯನ್ನು ಇಂದು ಎಲ್ಲ ಮೂಲಭೂತ ಸೌಕರ್ಯಗಳನ್ನೊಳಗೊಂಡ ಸುಸಜ್ಜಿತ ಕಟ್ಟಡದಲ್ಲಿ ವರ್ಗಗಳನ್ನು ನಡೆಸುವ ತನಕ ಮಾಡಿದ ಪ್ರಯತ್ನ ವಿವರಿಸಿದರು. ಶಾಲೆಯಲ್ಲಿ ರಂಗ ಮಂದಿರವನ್ನು ನಿರ್ಮಿಸಿರುವರು, ಆಟದ ಮೈದಾನ ಉಸ್ತುವಾರಿ ವಹಿಸಿರುವರು, ಶಾಲೆಗೆ ಶಿಕ್ಷಕರ ಕೊರತೆ ಎನಿಸಿದಾಗ ಅತಿಥಿ ಶಿಕ್ಷಕರನ್ನು ನೇಮಿಸಿಕೊಂಡು ಸಮಿತಿಯಿಂದ ಅವರಿಗೆ ಗೌರವ ಧನ ನೀಡಿರುವರು. ಎಸ್.ಡಿ.ಎಮ್.ಸಿ. ರಚನೆಯಿಂದ ಶಾಲಾಭಿವೃದ್ದಿಯಾಗಿರುವುದರಿಂದ ಇನ್ನುಮುಂದೆಯೂ ತಮ್ಮ ಶಾಲೆಯ ಅಭಿವೃದ್ಧಿಗಾಗಿ ಹಾಗೂ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಪ್ರೌಢ ಶಾಲೆ, ಪದವಿಪೂರ್ವ ಕಾಲೇಜಿನ ಮಂಜೂರಾತಿಗಾಗಿ ಪ್ರಯತ್ನ ನಡೆಸುತ್ತಿರುವುದನ್ನು ವಿವರಿಸಿದರು. ಮೇಲಾಧಿಕಾರಿಗಳ ಸ್ಪಂದನೆ ಹೇಗೆಯೆ ಇರಲಿ, ಸರ್ಕಾರದ ಅನುದಾನ ಬರಲಿ ಅಥವಾ ಬರದೇ ಇರಲಿ ನಮ್ಮ ಸಮಿತಿಯು ಶಾಲಾಭಿವೃದ್ಧಿಗೆ ಕಂಕಣಬದ್ಧವಾಗಿದೆ ಎಂಬುದು ಅವರ ಮನದಾಳದ ಮಾತಾಗಿತ್ತು. ಇಲ್ಲಿಯವರೆಗೂ ಶಾಲಾ ಅನುದಾನಗಳಲ್ಲಿ ಯಾವುದೇ ಅವ್ಯವಹಾರಗಳು ನಡದೇ ಇಲ್ಲ ಎಂಬುದನ್ನು ಸ್ಪಷ್ಟಪಡಿಸಿದರು.

ಶಾಲೆಯಲ್ಲಿ ಮಕ್ಕಳನ್ನು ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಲು ಒಂದಲ್ಲಾ ಒಂದು ಸ್ಪರ್ಧೆಯನ್ನು ಏರ್ಪಡಿಸುತ್ತಿರುವುದನ್ನು ತಿಳಿಸಿದರು.

ಶಾಲೆಯಲ್ಲಿ ಅನೇಕ ವಿದ್ವಾಂಸರನ್ನು ಕರೆಯಿಸಿ ನಾಡನುಡಿಯ ಹಬ್ಬಗಳನ್ನು ಆಚರಿಸುತ್ತೇವೆ ಎಂದರು.

ಶಾಲೆಯ ಅಭಿವೃದ್ದಿಗಾಗಿ ೭.೫ ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿ ಠೇವಣಿ ಇಟ್ಟಿರುವುದನ್ನು ಹೇಳಿದರು.

ಇದೆಲ್ಲವನ್ನು ಗಮನಿಸಿದಾಗ ಎಸ್.ಡಿ.ಎಮ್.ಸಿ.ಯು ಸಾಫಲ್ಯಗೊಂಡಿರುವುದು ಕಂಡು ಬಂತು. ಪರಸ್ಪರ ಸಹಕಾರದೊಂದಿಗೆ ಶಾಲೆಯ ಅಭಿವೃದ್ದಿಗೆ, ಕೈಗೊಳ್ಳುವ ಅವರ ಯೋಜನೆಗಳು ವಾಸ್ತವಿಕ ನೆಲೆಗಟ್ಟಿಗೆ ಸಾಕ್ಷಿ ಎಂಬಂತೆ ಇವೆ.

ಒಂದು ಶಾಲೆಯ ಎಸ್.ಡಿ.ಎಮ್.ಸಿ. ತನ್ನನ್ನು ತಾನು ಸಂಪೂರ್ಣವಾಗಿ ತೊಡಗಿಸಿಕೊಂಡರೆ ಶಾಲೆಯ ಅಭಿವೃದ್ದಿ ಹೇಗೆಲ್ಲಾ ಸಾಧ್ಯ ಎಂಬುದನ್ನು ಇಲ್ಲಿ ಕಾಣುತ್ತೇವೆ.

ಸಂಶೋಧನೆಯಲ್ಲಿ ಕಂಡ ಅಂಶಗಳು ವಾಸ್ತವಿಕವಾಗಿ ಈಡೇರುವುದು ಎಸ್.ಡಿ.ಎಮ್.ಸಿ. ಯ ಸಾಫಲ್ಯವನ್ನು ಎತ್ತಿ ತೋರಿಸುವಂತಿದೆ.

III.*ವಿದ್ಯಾರ್ಥಿಗಳ ಅಭಿಪ್ರಾಯದ ವಿಶ್ಲೇಷಣೆ*

೯ ವರ್ಷದಿಂದ ೧೩ ವರ್ಷದ ವರೆಗಿನ ವಿದ್ಯಾರ್ಥಿ/ನಿಯರನ್ನು ಎಸ್.ಡಿ.ಎಮ್.ಸಿ.ಯ ಕಾರ್ಯ ಚಟುವಟಿಕೆಗಳ ಬಗ್ಗೆ ತಿಳಿದುಕೊಳ್ಳಲು ಸಂದರ್ಶಿಸಿದಾಗ ಕಂಡುಕೊಂಡ ಅಂಶಗಳು.

೩ನೇ ತರಗತಿಯಿಂದ ೮ನೇ ತರಗತಿಯವರೆಗಿನ ವಿದ್ಯಾರ್ಥಿ/ನಿಯರು ಈ ಸಂಶೋಧನೆಯ ಸಂದರ್ಶನಾರ್ಥಿಗಳಾಗಿದ್ದರು. ೩,೪,೫,೬,೭ ಮತ್ತು ೮ನೇ ತರಗತಿಯ ವಿದ್ಯಾರ್ಥಿ/ನಿಯರಿಗೆ ಎಸ್.ಡಿ.ಎಮ್.ಸಿ.ಯ ಪೂರ್ವಾಪೂರ್ವಗಳ ಬಗ್ಗೆ ಗೊತ್ತಿರಲಿಲ್ಲ. ಅವರ ಶಾಲಾ ಚಟುವಟಿಕೆಗಳಲ್ಲಿ, ಕಲಿಕೆಯಲ್ಲಿ ರಾಷ್ಟ್ರೀಯ ಹಬ್ಬಗಳಲ್ಲಿ ಒಟ್ಟಿನಲ್ಲಿ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ ಎಸ್.ಡಿ.ಎಮ್.ಸಿ. ಯ ಪ್ರತ್ಯಕ್ಷ ಹಾಗೂ ಪರೋಕ್ಷ ಪಾತ್ರದ ಬಗ್ಗೆ ಅರಿವನ್ನು ಹೊಂದಿಲ್ಲದವರಾಗಿದ್ದರು.

ಆದರೆ ೮ನೇ ತರಗತಿಯ ಕೆಲವು ವಿದ್ಯಾರ್ಥಿ/ನಿಯರಿಗೆ ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಯ ಬಗ್ಗೆ ಅರಿವಿದ್ದದ್ದು ಗೊತ್ತಾಯಿತು. ಹಾಗೆ ನೋಡಿದರೆ ಎಸ್.ಡಿ.ಎಮ್.ಸಿ.ಯ ಪಾತ್ರದ ಪ್ರಭಾವವು ವರ್ಗಕೋಣೆಗಳಲ್ಲಿ ಆಗುವುದು ಕಡಿಮೆ ಹೌದು. ಮಕ್ಕಳ ವಿದ್ಯಾಭ್ಯಾಸಕ್ಕೆ ಅವರ ಪಾತ್ರ ದೊಡ್ಡದಿದ್ದರೂ ಅದು ಪರೋಕ್ಷವಾಗಿರುತ್ತದೆ. ಹೀಗಾಗಿ ಎಸ್.ಡಿ.ಎಮ್.ಸಿ.ಯ ಸಾಫಲ್ಯ-ವೈಫಲ್ಯಗಳು ವಿದ್ಯಾರ್ಥಿಗಳ ಅಭಿಪ್ರಾಯಗಳಿಂದ ಅಳೆಯಲು ಸಾಧ್ಯವಾಗದು. ಆದರೂ ಉನ್ನತ ವಿದ್ಯಾರ್ಥಿ ವೃಂದಕ್ಕೆ ಗೊತ್ತಿರುವುದಕ್ಕೆ ಕಾರಣ ಅವರ ಪಾಲಕರು ಅಥವಾ ಸಂಬಂಧಿಕರು ಎಸ್.ಡಿ.ಎಮ್.ಸಿ. ಯ ಸದಸ್ಯರಾಗಿರುವುದರಿಂದ.

ಶಾಲೆಯು ಯಾವುದೇ ಕುಂದು ಕೊರತೆಗಳನ್ನು ಎದುರಿಸುತ್ತಿಲ್ಲ. ನಮ್ಮ ಕಲಿಕೆ ಉಳಿದೆಲ್ಲ ಶಾಲೆಗಳಿಗಿಂತ ಮುಂದಿದೆ. ಬೇರೆ ಶಾಲೆಗಳಿಗಿಂತ ನಮ್ಮ ಫಲಿತಾಂಶ ಉತ್ತಮವಿದೆ ಎಂಬುದು ವಿದ್ಯಾರ್ಥಿ ವೃಂದದ ಅಭಿಪ್ರಾಯವಾಗಿದೆ.

ಈ ಮೇಲಿನ ಅಭಿಪ್ರಾಯವನ್ನು ವಿಶ್ಲೇಷಿಸಿದರೆ ಇಲ್ಲಿ ಶಿಕ್ಷಕ ಹಾಗೂ ಸಮಿತಿಯ ಪಾತ್ರ ಹೇಗಿದೆ ಎಂಬುದು ಸ್ಪಷ್ಟವಾಗುತ್ತದೆ.

### IV.*ಪಾಲಕರ ಅಭಿಪ್ರಾಯದ ವಿಶ್ಲೇಷಣೆ*

೧೦ ಜನ ಮಹಿಳಾ ಮತ್ತು ೧೦ ಜನ ಪುರುಷ ಪಾಲಕರನ್ನು ಎಸ್.ಡಿ.ಎಮ್.ಸಿ. ಕಾರ್ಯ ಚಟುವಟಿಕೆಗಳ ಕುರಿತು ಅರಿಯುವ ಉದ್ದೇಶಕ್ಕಾಗಿ ಸಂದರ್ಶಿಸಿದಾಗ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಹೀಗಿವೆ.

ಈ ಎಲ್ಲ ಪಾಲಕರಲ್ಲಿ ಎಸ್.ಡಿ.ಎಮ್.ಸಿ. ಯು ಸರಿಯಾಗಿ ಕಾರ್ಯನಿರ್ವಹಿಸುತ್ತಿರುವುದರ ಬಗ್ಗೆ ಗೌರವವಿದೆ. ಎಸ್.ಡಿ.ಎಮ್.ಸಿ. ಸದಸ್ಯರ ಹಾಗೂ ಶಾಲಾ ಸಿಬ್ಬಂದಿಯ ನಡುವೆ ಉತ್ತಮ ಹೊಂದಾಣಿಕೆ ಇದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಶಾಲೆಯ ಅಭಿವೃದ್ದಿಗಾಗಿ ಎಸ್.ಡಿ.ಎಮ್.ಸಿ.ಯ ಮೂಲಕ ಪಾಲಕರಾಗಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ತಾವು ಸದಾ ಕಾರ್ಯ ಮಾಡುತ್ತಲೇ ಇರುವುದನ್ನು ತಿಳಿಸಿದರು. ಆದರೆ ಶಾಲಾ ಕಾರ್ಯಕ್ರಮಗಳಲ್ಲಿ ಎಸ್.ಡಿ.ಎಮ್.ಸಿ.ಯ ಜೊತೆಗೆ ಸಕ್ರೀಯವಾಗಿ ಭಾಗವಹಿಸಲು ಆಗುವುದಿಲ್ಲ. ಏಕೆಂದರೆ ದೈನಂದಿನ ಕೆಲಸಗಳಲ್ಲಿ ಮಗ್ನರಾಗಿರುವುದರಿಂದ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಅಪರೂಪ ಎಂಬುದು ಅವರ ಅಭಿಪ್ರಾಯವಾಗಿತ್ತು. ಶಿಕ್ಷಕ ವೃಂದ ಮತ್ತು ಎಸ್.ಡಿ.ಎಮ್.ಸಿ. ತಮ್ಮ ಮಕ್ಕಳ ಕಲಿಕೆಯ ಬಗ್ಗೆ ನಿಗಾವಹಿಸುತ್ತಿರುವುದರಿಂದ ಪಾಲಕರು ವ್ಯವಸಾಯದ ಹಿನ್ನೆಲೆ ಹೊಂದಿರುವುದರಿಂದ ಕೃಷಿ ಚಟುವಟಿಕೆಗಳಲ್ಲಿ ಸದಾ ಮಗ್ನರಾಗಿರುವುದರಿಂದ ಮಕ್ಕಳ ಕಲಿಕೆಯ ಬಗ್ಗೆ ಅಷ್ಟೊಂದು ನಿಗಾ ವಹಿಸಲು ಆಗುವುದಿಲ್ಲ ಎಂಬುದು ಪಾಲಕರ ಅಭಿಪ್ರಾಯ. ಇನ್ನೂ ಕೆಲವು ಪಾಲಕರು ನಾವು ಅನಕ್ಷರಸ್ಥರು ಹೀಗಾಗಿ ನಿಗಾವಹಿಸಲಾಗದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು.

ಎಲ್ಲ ಪಾಲಕರು ಶಾಲೆಯ ಸಮಿತಿಯು ಚೆನ್ನಾಗಿದೆ ಅವರೆಲ್ಲಾ ತನು-ಮನ-ಧನದಿಂದ ಒಗ್ಗಟ್ಟಿನಿಂದ ಶಿಕ್ಷಕವೃಂದದ ಅಭಿಪ್ರಾಯಗಳೊಂದಿಗೆ, ಶಾಲೆಯನ್ನು ಅತ್ಯಂತ ಧಕ್ಷತೆಯಿಂದ ಮುನ್ನಡೆಸುತ್ತಿರುವುದನ್ನು ಅನೇಕ ಸಾಧಿಸಿದ ಕಾರ್ಯಗಳನ್ನು ನೆನಪಿಸಿಕೊಳ್ಳುತ್ತಾ ಸದಭಿಪ್ರಾಯವನ್ನು ವ್ಯಕ್ತಪಡಿಸಿದರು.

ಆದರೆ ಬೇರೆ ಶಾಲೆಯ ಎಸ್.ಡಿ.ಎಮ್.ಸಿ.ಗಳ ಬಗ್ಗೆ ಗೊತ್ತಿದ್ದರೂ ಅದರ ಬಗ್ಗೆ ಹೆಚ್ಚಿಗೇನೂ ಅಭಿಪ್ರಾಯ ವ್ಯಕ್ತಪಡಿಸಲಿಲ್ಲ. ಆ ಶಾಲೆಯ ಎಸ್.ಡಿ.ಎಮ್.ಸಿ.ಗಳು ಅಷ್ಟಕಷ್ಟೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಶಿಕ್ಷಕವೃಂದ ಹಾಗೂ ಎಸ್.ಡಿ.ಎಮ್.ಸಿ.ಗಳು ಉತ್ತಮವಾಗಿರುವುದರಿದ ನಮ್ಮ ಮಕ್ಕಳ ಕಲಿಕಾ ಗುಣಮಟ್ಟ ಹೆಚ್ಚಿದೆ ಎಂದು ವಿವರಿಸಿದರು.

ಒಟ್ಟಾರೆಯಾಗಿ ಶಾಲೆಯ ಅಭಿವೃದ್ದಿಯಲ್ಲಿ ಶಿಕ್ಷಕವೃಂದದ ಪಾತ್ರ ಮತ್ತು ಎಸ್.ಡಿ.ಎಮ್.ಸಿ.ಯ ಪಾತ್ರ ಅತ್ಯಂತ ಹಿರಿದಾಗಿದೆ ಎಂಬುದು ಪಾಲಕರೆಲ್ಲರ ಅಭಿಪ್ರಾಯವಾಗಿತ್ತು.

ಇದನ್ನೆಲ್ಲಾ ಗಮನಿಸಿದಾಗ ಈ ಶಾಲೆಯಲ್ಲಿ ಎಸ್.ಡಿ.ಎಮ್.ಸಿ. ಸಾಫಲ್ಯಗೊಂಡಿರುವುದು ಅಭಿಪ್ರಾಯಗಳನ್ನು ವಿಶ್ಲೇಷಿಸಿದಾಗ ಕಂಡುಬಂದ ಅಂಶವಾಗಿದೆ.

**೩.ಉಪಸಂಹಾರ**

ಎಸ್.ಡಿ.ಎಮ್.ಸಿ.ಗಳ ಸಾಫಲ್ಯ–ವೈಫಲ್ಯಗಳ ಅಧ್ಯಯನಕ್ಕಾಗಿ ಕ್ಷೇತ್ರಾಧ್ಯಯನ ಕೈಗೊಂಡಾಗ ಪಾಲಕ, ಶಿಕ್ಷಕ, ಸಮಿತಿಯ, ವಿದ್ಯಾರ್ಥಿಗಳ ಸಂದರ್ಶನ ಕೈಗೊಂಡಾಗ ಅವರೆಲ್ಲಾ ವ್ಯಕ್ತಪಡಿಸಿದ ಅಭಿಪ್ರಾಯಗಳ ಆಧಾರದ ಮೇಲೆ ಹಾಗೂ ಅಭಿಪ್ರಾಯಗಳನ್ನು ವಾಸ್ತವವಾಗಿ ಕಂಡುಕೊಂಡಾಗ ವ್ಯಕ್ತಪಡಿಸಿದ ಅಭಿಪ್ರಾಯಗಳಿಗೂ ಶಾಲಾಭಿವೃದ್ಧಿಗೂ ಹೊಂದಾಣಿಕೆ ಇರುವುದರಿಂದ ಇಲ್ಲಿ ಎಸ್.ಡಿ.ಎಮ್.ಸಿ.ಯು ಸಾಫಲ್ಯಗೊಂಡಿದ್ದು, ಕ್ಷೇತ್ರಾಧ್ಯಯನದಿಂದ ಕಂಡುಕೊಳ್ಳಲಾಯಿತು.

# ಅಧ್ಯಾಯ-೫

## ಸಮಾರೋಪ, ಫಲಿತಗಳು ಮತ್ತು ಸಲಹೆಗಳು

೧. ಸಮಾರೋಪ
೨. ಫಲಿತಗಳು
೩. ಸಲಹೆಗಳು

## ೧.ಸಮಾರೋಪ

ಅನಕ್ಷರತೆ, ಬಡತನ ಮತ್ತು ನಿರುದ್ಯೋಗ ರಾಷ್ಟ್ರಗಳ ಪ್ರಮುಖ ಸಮಸ್ಯೆಗಳಾಗಿವೆ. ನಮ್ಮ ದೇಶ ಇದರಿಂದ ಹೊರತಾಗಿಲ್ಲ. ಹಳ್ಳಿಗಳಿಂದ ಕೂಡಿದ ನಮ್ಮ ದೇಶದ ಹಳ್ಳಿಗಳತ್ತ ನೋಡಿದರೆ ಬಡತನ, ನಿರುದ್ಯೋಗ, ಅನಕ್ಷರತೆ ಮೊದಲಾದ ಸಮಸ್ಯೆಗಳಿಂದ ಕೂಡಿದೆ. ಕೇಂದ್ರ ರಾಜ್ಯ ಸರ್ಕಾರಗಳು ವಿವಿಧ ಯೋಜನೆಗಳ ಮೂಲಕ, ಆಯೋಗಗಳ ಮೂಲಕ, ಕಾರ್ಯಕ್ರಮಗಳ ಮೂಲಕ ಈ ಸಮಸ್ಯೆಗಳನ್ನು ನಿರ್ಮೂಲನೆ ಮಾಡಲು ಪ್ರಯತ್ನಗಳನ್ನು ಮಾಡುತ್ತಲೇ ನಡೆದಿದೆ. ಆದರೆ ಯಾವ ಸಮಸ್ಯೆಗಳೂ ಸಂಪೂರ್ಣವಾಗಿ ನಿವಾರಣೆಯಾಗಿಲ್ಲ. ಇದಕ್ಕೆ ಕಾರಣ ಭ್ರಷ್ಟಾಚಾರ, ಸೌಲಭ್ಯಗಳ ದುರುಪಯೋಗ, ರಾಜಕಾರಣ, ವಿಳಂಬನೀತಿ ಇನ್ನೂ ಮೊದಲಾದ ಕಾರಣಗಳಾಗಿವೆ.

ಸ್ವಾತಂತ್ರ್ಯ ಪೂರ್ವದಿಂದಲೂ ಶಿಕ್ಷಣ ವ್ಯವಸ್ಥೆ ನಮ್ಮಲ್ಲಿ ಜಾರಿಯಲ್ಲಿತ್ತಾದರೂ ಅದು ಪ್ರಬಲ ವರ್ಗಗಳ ಸ್ವಾಮಿತ್ವಕ್ಕೆ ಒಳಪಟ್ಟಿತ್ತು. ಸ್ವಾತಂತ್ರ್ಯ ನಂತರ ಸಂವಿಧಾನ ಜಾರಿಯಾದ ಬಳಿಕ ೧೦ ವರ್ಷಗಳ ಅವಧಿಯಲ್ಲಿ ದೇಶದಲ್ಲಿ ಸಂಪೂರ್ಣ ಸಾಕ್ಷರತೆಯ ಗುರಿಯನ್ನು ಹೊಂದಲಾಗಿತ್ತು. ಆದರೆ ಸಂವಿಧಾನದ ಆಶೆಯು ಇನ್ನೂ ಈಡೇರಿಲ್ಲ. ಸಂಪೂರ್ಣ ಶೈಕ್ಷಣಿಕ ವ್ಯವಸ್ಥೆಯ ಮೂಲಕ ಸಾಕ್ಷರತೆಯ ಗುರಿ ತಲುಪಲು ಸಾಮಾಜಿಕ, ಆರ್ಥಿಕ, ಜಿಡ್ಡುಗಟ್ಟಿದ ಸಂಪ್ರದಾಯಗಳಿಂದ ಇನ್ನೂ ಮೊದಲಾದ ಸಮಸ್ಯೆಗಳಿಂದ ಸಾಧಿಸಲಾಗುತ್ತಿಲ್ಲ. ಅನೇಕ ಆಯೋಗಗಳು ನೀಡಿದ ಸೂತ್ರಗಳಂತೆ ಶೈಕ್ಷಣಿಕ ಸುಧಾರಣೆಗಾಗಿ, ಶಾಲೆಗಳ ಅಭಿವೃದ್ದಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ. ೨೦೦೧ ರಲ್ಲಿ ಕರ್ನಾಟಕ ಸರ್ಕಾರ ಶಾಲೆಯ ಅಭಿವೃದ್ದಿ ಮತ್ತು ಮೇಲುಸ್ತುವಾರಿಗಾಗಿ "ಶಾಲಾಭಿವೃದ್ದಿ ಮತ್ತು ಮೇಲುಸ್ತುವಾರಿ ಸಮಿತಿ" ಯನ್ನು ರಚಿಸಿತು. ಈ ಸಮಿತಿಗಳಿಗೆ ಸರ್ಕಾರ ಹಣಕಾಸಿನ ನೆರವನ್ನು ನೀಡಿತು.

ರಾಷ್ಟ್ರಗಳ ಅಭಿವೃದ್ದಿಯಲ್ಲಿ ಶಿಕ್ಷಣವೊಂದು ಪ್ರಮುಖ ವಿಷಯವಾಗಿದೆ. ಸರ್ಕಾರಗಳು ತಮ್ಮ ಬಜೆಟ್‌ಗಳಲ್ಲಿ ಹಾಗೇಯೆ ಪಂಚವಾರ್ಷಿಕ ಯೋಜನೆಗಳಲ್ಲಿಯೂ ಕೂಡಾ ಶಿಕ್ಷಣವನ್ನು ಒಂದು ಪ್ರಮುಖ ಅಂಶವನ್ನಾಗಿ ಅನುಮೋದಿಸುತ್ತಿದೆ. ಕರ್ನಾಟಕ ಸರ್ಕಾರ ೨೦೦೩-೦೪ ನೇ ಶೈಕ್ಷಣಿಕ ವರ್ಷವನ್ನು ಸಾಕ್ಷರ ವರ್ಷವೆಂದು ಘೋಷಿಸಿತು. ಎಸ್.ಡಿ.ಎಮ್.ಸಿ. ಸ್ಥಾಪಿಸುವ ಮುನ್ನ ಹಲವಾರು ಕಾರ್ಯಕ್ರಮಗಳು ಮತ್ತು ಯೋಜನೆಗಳು ಜಾರಿಯಲ್ಲಿದ್ದವು. ಅವುಗಳೆಲ್ಲವನ್ನೂ ಹಿಂಪಡೆದು ಶಾಲಾಭಿವೃದ್ದಿಗಾಗಿಯೇ ಎಸ್.ಡಿ.ಎಮ್.ಸಿ.ಗಳನ್ನು ರಚಿಸಿದರು. ಇಂದು ಸರ್ಕಾರಿ ಮತ್ತು ಅನುದಾನಿತ ಶಾಲೆಗಳು ಎಸ್.ಡಿ.ಎಮ್.ಸಿ.ಗಳನ್ನು ಹೊಂದಿವೆ.

ಈ ಎಸ್.ಡಿ.ಎಮ್.ಸಿ. ಕಾರ್ಯ ಚಟುವಟಿಕೆಗಳನ್ನು ತಿಳಿದುಕೊಳ್ಳಲು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟ ಹಿಡಕಲ್ಲ ನ್ನು ಆಯ್ದುಕೊಳ್ಳಲಾಯಿತು. ಈ ಸಮಿತಿಯು ಸಾಫಲ್ಯತೆಯ ಕಡೆಗೆ ಸಾಗುತ್ತಿರುವುದು ಕ್ಷೇತ್ರಾಧ್ಯಯನದಿಂದ ತಿಳಿದುಬಂದ ಅಂಶವಾಗಿತ್ತು.

## ೨.ಫಲಿತಗಳು

### *ಸಂಶೋಧನೆಯಿಂದ ಕಂಡುಕೊಂಡ ಅಂಶಗಳು*

*ಸಂದರ್ಶನಾರ್ಥಿಗಳು*

ಎಸ್.ಡಿ.ಎಮ್.ಸಿ.ಯ ಕಾರ್ಯ ಚಟುವಟಿಕೆಗಳನ್ನು ತಿಳಿಯುವ ಸಲುವಾಗಿ ಶಾಲಾ ಸಿಬ್ಬಂದಿ, ಶಾಲಾ ಎಸ್.ಡಿ.ಎಮ್.ಸಿ. ಸದಸ್ಯರನ್ನು, ಆ ಶಾಲೆಯ ಪಾಲಕವೃಂದವನ್ನು ಮತ್ತು ವಿದ್ಯಾರ್ಥಿವೃಂದವನ್ನು ಪ್ರಶ್ನಿಸಿ ಅಭಿಪ್ರಾಯ ಪಡೆಯಲಾಯಿತು.

*ಶಿಕ್ಷಕರಿಂದ ಕಂಡುಕೊಂಡ ಅಂಶಗಳು*

೩೦ ರಿಂದ ೫೫ ವರ್ಷ ವಯಸ್ಸಿನ ಎಲ್ಲ ೭ ಜನ ಶಿಕ್ಷಕ ವೃಂದವನ್ನು ಸಂದರ್ಶಿಸಿದಾಗ ಅವರೆಲ್ಲರೂ ಎಸ್.ಡಿ.ಎಮ್.ಸಿ. ಕಾರ್ಯಚಟುವಟಿಕೆಗಳ ಬಗ್ಗೆ ಧನಾತ್ಮಕ ನಿಲುವನ್ನು ಹೊಂದಿದವರಾಗಿದ್ದರು. ಇದು ಎಸ್.ಡಿ.ಎಮ್.ಸಿ. ಸಾಫಲ್ಯದ ಪ್ರತೀಕ.

*ಎಸ್.ಡಿ.ಎಮ್.ಸಿ. ಸದಸ್ಯರಿಂದ ಕಂಡುಕೊಂಡ ಅಂಶಗಳು*

೨೫ ರಿಂದ ೭೫ ವಯಸ್ಸಿನ ಎಲ್ಲ ಎಸ್.ಡಿ.ಎಮ್.ಸಿ. ಸದಸ್ಯರನ್ನು ಸಂದರ್ಶಿಸಿದಾಗ ಎಲ್ಲ ೧೯ಜನ ಸಮಿತಿಯ ಸದಸ್ಯರು ರಾಜಕೀಯ ಪ್ರಭಾವವಿಲ್ಲದ, ತಮ್ಮಲ್ಲಿ ವೈಮನಸ್ಸಿಲ್ಲದ, ಒಗ್ಗಟ್ಟಿನೊಂದಿಗೆ ಶಾಲಾಭಿವೃದ್ಧಿಯೇ ಮೂಲಮಂತ್ರವನ್ನಾಗಿಸಿಕೊಂಡು ತಮ್ಮ ತನು-ಮನ-ಧನದಿಂದ ತೊಡಗಿಕೊಂಡಿರುವ ಬಗ್ಗೆ ಅಭಿಮಾನದ ಮಾತುಗಳನ್ನು ಹಾಗೇಯೆ ತ್ಯಾಗದ ಕೊಡುಗೆಗಳನ್ನು ಉಲ್ಲೇಖಿಸಿದರು. ಇದು ಕ್ಷೇತ್ರಾಧ್ಯಯನದಲ್ಲಿ ಒಂದು ಮಾದರಿ ಎಸ್.ಡಿ.ಎಮ್.ಸಿ. ಎನಿಸಿತು. ಎಸ್.ಡಿ.ಎಮ್.ಸಿ.ಯ ರಚನೆಯ ಹಿನ್ನೆಲೆಯ ಉದ್ದೇಶ ಇಲ್ಲಿ ಸಾಕಾರಗೊಳ್ಳುತ್ತಿರುವುದು ಅಭಿನಂದನೀಯ.

*ವಿದ್ಯಾರ್ಥಿಗಳಿಂದ ಕಂಡುಕೊಂಡ ಅಂಶಗಳು*

೯ ರಿಂದ ೧೩ ವಯಸ್ಸಿನ ಆಯ್ದ ೧೦ ವಿದ್ಯಾರ್ಥಿಗಳು ಹಾಗೂ ೧೦ ವಿದ್ಯಾರ್ಥಿನಿಯರನ್ನು ಸಂದರ್ಶಿಸಿದಾಗ ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಯ ಕುರಿತು ಅವರಿಗೆ ಯಾವುದೇ ಹೆಚ್ಚಿನ ಅರಿವು ಇರಲಿಲ್ಲ. ಅವರಿಗೆ ಎಸ್.ಡಿ.ಎಮ್.ಸಿ. ಎಂದರೇನೆ ಗೊತ್ತಿಲ್ಲ. ೮ನೇ ತರಗತಿ ಮಕ್ಕಳಿಗೆ ಮಾತ್ರ ಎಸ್.ಡಿ.ಎಮ್.ಸಿ.ಯ ಬಗ್ಗೆ ಅರಿವು ಇದೆ ಅಂದರೆ ೧ನೇ ತರಗತಿಯಿಂದ ೮ನೇ ತರಗತಿಯವರೆಗಿನ ಈ ಶಾಲೆಯ ಮಕ್ಕಳಿಗೆ ಎಸ್.ಡಿ.ಎಮ್.ಸಿ. ಕಾರ್ಯ ಚಟುವಟಿಕೆಗಳು ತಿಳಿದಿಲ್ಲ. ಕಾರಣವೇನೆಂದರೆ, ಎಸ್.ಡಿ.ಎಮ್.ಸಿ. ಕಾರ್ಯಚಟುವಟಿಕೆಗಳಲ್ಲಿ ಮಕ್ಕಳ ಪಾತ್ರ ಯಾವುದೂ ಇಲ್ಲ. ಹಾಗೂ ಎಸ್.ಡಿ.ಎಮ್.ಸಿ. ಯನ್ನು ಅರಿತುಕೊಳ್ಳುವ ವಯಸ್ಸೂ ಕೂಡಾ ಅವರದ್ದಲ್ಲ. ಎಸ್.ಡಿ.ಎಮ್.ಸಿ. ಪ್ರಭಾವ ಮಕ್ಕಳ ಮೇಲೆ ಇಲ್ಲ.

*ಪಾಲಕರಿಂದ ಕಂಡುಕೊಂಡ ಅಂಶಗಳು*

೨೫ ರಿಂದ ೫೦ಯಸ್ಸಿನ ಒಳಗಿನ ಆಯ್ದ ೧೦ ಜನ ಪುರುಷ ಪಾಲಕರು ಹಾಗೂ ೧೦ ಜನ ಆಯ್ದ ಮಹಿಳಾ ಪಾಲಕರನ್ನು ಸಂದರ್ಶಿಸಿದಾಗ ಎಸ್.ಡಿ.ಎಮ್.ಸಿ. ಇರುವುದರಿಂದಲೇ ಶಾಲೆಯು ಬೆಳವಣಿಗೆ ಆಗಿದೆ ಎಂಬುದು ಅವರ ಮನೋಧೋರಣೆ ಆಗಿದೆ. ಈ ಶಾಲೆಯ ಅಭಿವೃದ್ದಿಗಾಗಿ ಶಾಲೆಯ ವ್ಯಾಪ್ತಿಯ ಎಲ್ಲ ಜನರು ತಮ್ಮ ಕೈಲಾದಷ್ಟು ಶಾಲಾಭಿವೃದ್ದಿಗೆ ಆರ್ಥಿಕ ರೂಪದಲ್ಲಿ ಮತ್ತು ವಸ್ತುಗಳ ರೂಪದಲ್ಲಿ ದೇಣಿಗೆ ಸಲ್ಲಿಸಿರುವರು. ಖಾನಟ್ಟಿಯವರ ೧೦ ಗುಂಟೆ ಭೂದಾನ ಸ್ಮರಣೀಯ. ಮನ್ನಿಕೇರಿ ಮಾಸ್ತರರು ೧೯೫೮ ರಲ್ಲಿ ಒಂದು ಗುಡಿಸಿಲಿನಲ್ಲಿ ಪ್ರಾರಂಭಿಸಿದ ಅಕ್ಷರ ದಾಸೋಹ ೨೦೦೮ ರಲ್ಲಿ ಸುವರ್ಣಮಹೋತ್ಸವವನ್ನಾಚರಿಸಿತು. ಶಾಲಾಭಿವೃದ್ದಿಗೆಂದೆ ಇಲ್ಲಿಯವರೆಗೆ ಸಂಗ್ರಹಿಸಿರುವ ನಿಧಿ ೭.೫ ಲಕ್ಷ ಗಳಾಗಿವೆ. ಅನೇಕ ಕಾರ್ಯಕ್ರಮಗಳೂ ಇಲ್ಲಿ ನಿರಂತರವಾಗಿ ಸಾಗುತ್ತವೆ. ಉದಾ: ನಾಡ ಹಬ್ಬ, ಗಣೇಶ ಚತುರ್ಥಿ, ನುಡಿನಮನ ಇತ್ಯಾದಿ.

ಎಸ್.ಡಿ.ಎಮ್.ಸಿ. ಸಾಫಲ್ಯಗೊಂಡ ಈ ಶಾಲೆ ಇತರ ಶಾಲೆಗಳಿಗೆ ಮಾದರಿಯಾಗಿದೆ. ಪ್ರೌಢ, ಪದವಿಪೂರ್ವ ವರ್ಗಗಳು ಆದಷ್ಟು ಬೇಗ ಪ್ರಾರಂಭಗೊಳ್ಳಲಿ ಎಂಬುದು ಇವರೆಲ್ಲರ ಹೆಬ್ಬಯಕೆಯಾಗಿದೆ.

*೩.ಸಲಹೆಗಳು*

ಎಸ್.ಡಿ.ಎಮ್.ಸಿ. ಗಳು ಯಶಸ್ವಿಯಾಗಬೇಕಾದರೆ ಸಮಾನ ಮನಸ್ಕರನ್ನು ಒಳಗೊಂಡಿರಬೇಕು. ಸ್ವಲ್ಪ ಹಿರಿಯರಾಗಿದ್ದರೂ ಪರವಾಗಿಲ್ಲ. ಇದರಿಂದ ತಮ್ಮ ಜವಾಬ್ದಾರಿ, ಉದ್ದೇಶಗಳನ್ನು ಅರಿತು ಮುನ್ನಡೆಯಲು ಸಾಧ್ಯವಾಗುತ್ತದೆ.

೧. ಸಮಿತಿಯನ್ನು ರಚಿಸಿಕೊಳುವಾಗ ಸದಸ್ಯರೆಲ್ಲರೂ ಸಾಕ್ಷರರಿರಬೇಕು.

೨. ಸಂಘದ ಸದಸ್ಯರು ಅನುದಾನಗಳ ಕೊರತೆಯಿದ್ದಾಗ ಕೈಗೊಂಡ ಕಾರ್ಯ ಪೂರ್ಣಗೊಳಿಸಲು ತಮ್ಮ ದೇಣಿಗೆಯನ್ನು ನೀಡಲು ಸಿದ್ದರಿರಬೇಕು.

೩. ಸಮಿತಿಗೆ ಬರುವ ಅನುದಾನಗಳನ್ನು ನಿಷ್ಠೆಯಿಂದ ಬಳಸಿಕೊಳ್ಳುವುದನ್ನು ರೂಢಿಸಿಕೊಳ್ಳಬೇಕು.

೪. ಎಸ್.ಡಿ.ಎಮ್.ಸಿ. ಸಮಿತಿಗಳು ಯಾವ ಕಾರಣಕ್ಕೂ ರಾಜಕೀಯದಿಂದ ಪ್ರೇರಿತಗೊಳ್ಳಬಾರದು.

೫. ಸಮಿತಿಗಳು ಶಾಲಾಭಿವೃದ್ದಿಯನ್ನೆ ಮೂಲಂತ್ರವನ್ನಾಗಿಸಿಕೊಂಡು ಬೆಳೆಸಬೇಕು.

೬. ಕಾಲಕಾಲಕ್ಕೆ ನೀಡುವ ತರಬೇತಿಗೆ ಕಡ್ಡಾಯವಾಗಿ ಹಾಜರಾಗಬೇಕು. ತರಬೇತಿಯಿಂದ ತಿಳಿದುಕೊಂಡ ಅಂಶಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ತಿಳಿದುಕೊಳ್ಳಬೇಕು.

೭. ಬೇರೆ ಬೇರೆ ಎಸ್.ಡಿ.ಎಮ್.ಸಿ. ಕಾರ್ಯಚಟುವಟಿಕೆಗಳನ್ನು ಕೂಡಾ ಒಂದು ಅಧ್ಯಯನ ದೃಷ್ಟಿಯಿಂದ ತಿಳಿದುಕೊಳ್ಳಬೇಕು. ಅಲ್ಲಿ ಒಳ್ಳೆಯ ಅಂಶ ಕಂಡು ಬಂದರೆ ಅವುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ಸಮಿತಿಯು ಸಂಘಗಳಲ್ಲಿ ಚರ್ಚಿಸಬೇಕು.

೮. ಕಾಲಕಾಲಕ್ಕೆ ಶಾಲೆಗಳಿಗೆ ಸಾಹಿತಿಗಳನ್ನು, ಸಮಾಜಸುಧಾರಕರನ್ನು ವಿವಿಧ ಕ್ಷೇತ್ರಗಳಲ್ಲಿ ಹೆಸರುಗಳಿಸಿದ ಗಣ್ಯರನ್ನು ಶಾಲೆಗಳಿಗೆ ಬರಮಾಡಿಕೊಂಡು ವಿದ್ಯಾರ್ಥಿಗಳೊಂದಿಗೆ ಸಮಾಲೋಚಿಸಲು ಅವಕಾಶ ಕಲ್ಪಿಸಿಕೊಡಬೇಕು.

೯. ಶಾಲೆಗೆ ಬಂದ ಅನುದಾನವನ್ನು ಅಪ್ಪಿ ತಪ್ಪಿಯೂ ಕೂಡಾ ವೈಯಕ್ತಿಕ ಕೆಲಸಗಳಿಗಾಗಿ ಯಾರೂ ಬಳಸಿಕೊಳ್ಳಬಾರದು.

೧೦. ಸಮಿತಿಗಳು ನಿಷ್ಪಕ್ಷಪಾತವಾಗಿ, ಪ್ರಾಮಾಣಿಕವಾಗಿ ಒಗ್ಗಟ್ಟಿನಿಂದ ಸೇವೆ ಸಲ್ಲಿಸಬೇಕು.

೧೧. ಸಮಿತಿಗಳು ಅತ್ಯಂತ ಜವಾಬ್ದಾರಿಯುತವಾಗಿ ಕುಂದುಕೊರತೆಗಳನ್ನು ಸಕಾಲದಲ್ಲಿ ಪರಿಹಾರ ಕಂಡುಕೊಳ್ಳುವಂತೆ ನಿರ್ವಹಿಸಬೇಕು.

೧೨. ಸಮಿತಿಯ ಸದಸ್ಯರು ಸಮಾಜದಲ್ಲಿ ಗೌವರವಯುತವಾಗಿ ನಡೆದುಕೊಳ್ಳಬೇಕು. ಹಾಗೂ ವ್ಯಸನಗಳಿಂದ ದೂರವಿರಬೇಕು.

೧೩. ಶಾಲೆಯು ಮುಂದಿನ ನಾಗರಿಕರನ್ನು ತಯಾರಿಸುವ ಕೇಂದ್ರವಾಗಿರುವದರಿಂದ ಸದಸ್ಯರು, ಶಿಕ್ಷಕರು ಮಾದರಿ ವ್ಯಕ್ತಿಗಳಾಗಿ ಮಕ್ಕಳ ಮೇಲೆ ಒಳ್ಳೆಯ ಪರಿಣಾಮ ಬೀರುವಂತವರಾಗಿರಬೇಕು.

೧೪. ಶಾಲಾ ನಿರ್ವಹಣೆಯಲ್ಲಿ ಪಾಲಕರನ್ನು ನಿರ್ಲಕ್ಷಿಸಬಾರದು.

೧೫. ಶಾಲೆಯು ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಮತ್ತು ಪಾಲಕರನ್ನು ಬೆಸೆಯುವ ರೀತಿಯಲ್ಲಿ ಸಮಿತಿಯು ಸೇತುಬಂದುವಾಗಿ ಕಾರ್ಯನಿರ್ವಹಿಸಬೇಕು.

೧೬. ಸಮಿತಿಯು ಪಾಲಕರ ಸಲಹೆಗಳಿಗೆ  ಮನ್ನನೆ ನೀಡಬೇಕು.

೧೭. ಸಮಿತಿಗಳು ಶಿಕ್ಷಣ ಇಲಾಖೆಯೊಂದಿಗೆ  ಉತ್ತಮ ಬಾಂಧವ್ಯ ಹೊಂದಿರಬೇಕು.

೧೮. ಶಾಲೆಯಲ್ಲಿ ಕಲಿಕಾ ಗುಣಮಟ್ಟ ಹೆಚ್ಚಿಸಲು ಮೇಲಿಂದ ಮೇಲೆ ಸ್ಪರ್ಧೆಗಳ, ಪರೀಕ್ಷೆಗಳ ಫಲಿತಾಂಶಗಳನ್ನು ಗಮನಿಸುತ್ತಿರಬೇಕು ಹಾಗೂ ಸೂಕ್ತ ಮಾರ್ಗದರ್ಶನ ನೀಡುತ್ತಿರಬೇಕು.

೧೯. ಶಾಲೆಯಲ್ಲಿ ಯಾವುದೇ ಕಾರಣಕ್ಕೂ ಲಿಂಗ, ಜಾತಿ, ಮತ, ಭಾಷೆ, ಬಣ್ಣಗಳ ಬೇಧ ಬಾವಗಳು ಸುಳಿಯದಂತೆ ನೋಡಿಕೊಳ್ಳಬೇಕು.

೨೦. ಸರ್ವರೂ ಸಮಾನರು, ಸಹಬಾಳ್ವೆಯೇ ಜೀವನ ಎಂಬ ತತ್ವದಡಿಯಲ್ಲಿ ಎಲ್ಲರೂ ಕಾರ್ಯ ನಿರ್ವಹಿಸಬೇಕು.

***ಉಪಸಂಹಾರ***

ಸಂಶೋಧನೆಗೆ ಆಯ್ದುಕೊಂಡ ವಿಷಯವಾದ ಶಾಲಾ ಅಬಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಅಧ್ಯಯನದ ಭಾಗವಾಗಿ ಮಾದರಿಯಾಗಿ ತೆಗೆದುಕೊಂಡ ಶಾಲೆಯ ಎಸ್.ಡಿ.ಎಮ್.ಸಿ. ಯ ಕಾರ್ಯ ಚಟುವಟಿಕೆಗಳನ್ನು ಕೂಲಂಕುಷವಾಗಿ ಅಭ್ಯಸಿಸಿದಾಗ ಎಸ್.ಡಿ.ಎಮ್.ಸಿ. ಯು ಸಾಫಲ್ಯಗೊಂಡದ್ದು ಕಂಡು ಬಂದಿತು. ಸಮುದಾಯದ ಸಹಭಾಗಿತ್ವವು ಇಲ್ಲಿ ಅರ್ಥಪೂರ್ಣವಾಗಿದೆ. ೨೦೦೧ ರಲ್ಲಿ ಜಾರಿಗೆ ಬಂದ ಆಜ್ಞೆಯ ಪ್ರಕಾರ ರಚಿಸಲಾಗಿರುವ ಎಸ್.ಡಿ.ಎಮ್.ಸಿ. ಗಳು ಸಂವಿಧಾನ ಘೋಷಿಸಿರುವ ಶಿಕ್ಷಣವು ಮೂಲಭೂತ ಹಕ್ಕು ಎಂಬುದನ್ನು ಸರ್ಕಾರಗಳು ಈಡೇರಿಸಲು ಎಸ್.ಡಿ.ಎಮ್.ಸಿ. ಗಳ ಮೂಲಕ ಪ್ರಯತ್ನಿಸುತ್ತಿರುವುದು ಸ್ಪಷ್ಟವಾಗುತ್ತದೆ.. ಸಮುದಾಯದ ಸಹಭಾಗಿತ್ವದಲ್ಲಿ ಎಸ್.ಡಿ.ಎಮ್.ಸಿ.ಗಳು ಚೆನ್ನಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಂಡುಕೊಳ್ಳಲಾಗಿದೆ. ಮಕ್ಕಳ, ಪಾಲಕರ ಹಾಗೂ ಶಿಕ್ಷಕರ ನಡುವೆ ಎಸ್.ಡಿ.ಎಮ್.ಸಿ. ಒಂದು ಸೇತುಬಂದುವಾಗಿ ಕಾರ್ಯನಿರ್ವಹಿಸುತ್ತಿದೆ.

## ಅನುಬಂಧ

## ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್.ಪದವಿಗಾಗಿ ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಸಾದರ ಪಡಿಸಿರುವ ಸಂಶೋಧನ ಪ್ರಬಂಧ ಸಂದರ್ಶನ ಅನುಸೂಚಿ

**ವಿಷಯ: ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ: ಒಂದು ಅಧ್ಯಯನ (ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಮನ್ನಿಕೇರಿ ತೋಟ ಹಿಡಕಲ್ಲ ಅನುಲಕ್ಷಿಸಿ)**

ಅ

### ಪ್ರಶ್ನಾವಳಿಗಳು–ಶಿಕ್ಷಕ ವೃಂದಕ್ಕೆ

೧] ಈ ಶಾಲೆಯಲ್ಲಿ ಎಸ್.ಡಿ.ಎಮ್.ಸಿ. ರಚನೆಯಾಗಿದೆಯೇ?

೨] ಎಸ್.ಡಿ.ಎಮ್.ಸಿ. ಸದಸ್ಯರ ಸಂಖ್ಯೆ ಎಷ್ಟು?

೩] ಎಸ್.ಡಿ.ಎಮ್.ಸಿ. ಯು ಸರಿಯಾಗಿ ಕಾರ್ಯ ನಿರ್ವಹಿಸುತ್ತಿದೆಯೇ?

೪] ಎಸ್.ಡಿ.ಎಮ್.ಸಿ. ಸದಸ್ಯರಿಂದ ಶಾಲಾ ಕಾರ್ಯಕ್ರಮದಲ್ಲಿ ಏನಾದರೂ ಕಿರುಕುಳ ಇದೆಯೇ?

೫] ಎಸ್.ಡಿ.ಎಮ್.ಸಿ. ಸ್ಥಾಪನೆಯಿಂದ ನಿಮ್ಮ ಶಾಲೆಗೆ ಉಪಯೋಗವಾಗಿದೆಯೇ?

೬] ಎಸ್.ಡಿ.ಎಮ್.ಸಿ. ಯಿಂದ ನಿಮ್ಮ ಶಾಲೆಗೆ ಆದ ಪ್ರಯೋಜನಗಳೇನು?

೭] ಎಸ್.ಡಿ.ಎಮ್.ಸಿ. ಸಭೆಗೆ ಎಲ್ಲ ಸದಸ್ಯರು ಆಸಕ್ತಿಯಿಂದ ಭಾಗವಹಿಸುತ್ತಾರೆಯೇ?

೮] ಎಸ್.ಡಿ.ಎಮ್.ಸಿ. ಸದಸ್ಯರು ಶಾಲಾ ಅಭಿವೃದ್ಧಿ ಕಾರ್ಯಗಳಲ್ಲಿ ಸಕ್ರೀಯಾಗಿ ಪಾಲ್ಗೊಳ್ಳುತ್ತಾರೆಯೇ?

೯] ಎಸ್.ಡಿ.ಎಮ್.ಸಿ. ಯವರು ಸರ್ಕಾರಿ ಅನುದಾನಗಳನ್ನು ಸದ್ಬಳಕೆ ಮಾಡಿಕೊಳ್ಳುತ್ತಾರೆಯೇ?

೧೦] ಎಸ್.ಡಿ.ಎಮ್.ಸಿ. ಯಿಂದ ಶಾಲಾ ಅಭಿವೃದ್ಧಿಗೆ ಆದ ಭೌತಿಕ ಸೌಲಭ್ಯಗಳೇನು?

೧೧] ಎಸ್.ಡಿ.ಎಮ್.ಸಿ. ಸದಸ್ಯರು ಮತ್ತು ಶಾಲಾ ಸಿಬ್ಬಂದಿಗಳ ನಡುವೆ ಹೊಂದಾಣಿಕೆ ಇದೆಯೇ?

೧೨] ನಿಮ್ಮ ಎಸ್.ಡಿ.ಎಮ್.ಸಿ. ಯಲ್ಲಿ ರಾಜಕೀಯ ಪ್ರಭಾವ ಇದೆಯೇ?

ಬ

## ಪ್ರಶ್ನಾವಳಿಗಳು–ಎಸ್.ಡಿ.ಎಮ್.ಸಿ. ಸದಸ್ಯರುಗಳಿಗೆ

೧] ಎಸ್.ಡಿ.ಎಮ್.ಸಿ. ಎಂದರೇನು?

೨] ಎಸ್.ಡಿ.ಎಮ್.ಸಿ. ಸದಸ್ಯರಾಗಿರಲು ತಮಗೆ ಆಸಕ್ತಿ ಇದೆಯೇ?

೩] ಎಸ್.ಡಿ.ಎಮ್.ಸಿ. ಸದಸ್ಯರಾಗಿ ತಾವು ಶಾಲಾ ಅಭಿವೃದ್ದಿಗೆ ಯಾವ ರೀತಿ ಕಾರ್ಯ ನಿರ್ವಹಿಸುತ್ತಿದ್ದಿರಿ?

೪] ಕಲಿಕಾ ಗುಣಮಟ್ಟ ಸುಧಾರಿಸಲು ಹೇಗೆ ಮೇಲ್ವಿಚಾರಣೆ ಮಾಡುತ್ತೀರಿ?

೫] ಇಲ್ಲಿಯವರೆಗೆ ಶಾಲಾ ಅಭಿವೃದ್ದಿಗೆ ತಮ್ಮಿಂದಾದ ಕೊಡುಗೆಗಳೇನು?

೬] ನಿಮ್ಮ ಎಸ್.ಡಿ.ಎಮ್.ಸಿ. ರಚನೆಯಿಂದ ಶಾಲಾ ಅಭಿವೃದ್ದಿ ಎನಿಸಿದೆಯೇ?

೭] ಶಾಲಾ ಅಭಿವೃದ್ದಿಗಾಗಿ ಇನ್ನುಮುಂದೆ ತಾವು ಕೈಗೊಳ್ಳಬಹುದಾದ ಯೋಜನೆಗಳೇನು?

೮] ಕಲಿಕಾಗುಣಮಟ್ಟ ಹೆಚ್ಚಿಸಲು ತಮ್ಮ ಸಲಹೆಗಳೇನು?

೯] ಎಸ್.ಡಿ.ಎಮ್.ಸಿ. ಸದಸ್ಯರಾದ ತಮಗೆಲ್ಲಾ ಸರ್ಕಾರದಿಂದ ತರಬೇತಿಗಳಾಗಿವೆಯೇ?

೧೦] ಎಸ್.ಡಿ.ಎಮ್.ಸಿ. ಯಲ್ಲಿ ಏನಾದರೂ ಬದಲಾವಣೆಗಳನ್ನು ಬಯಸಿದ್ದೀರಾ?

೧೧] ಎಸ್.ಡಿ.ಎಮ್.ಸಿ. ಯೊಂದಿಗೆ ಮೇಲಾಧಿಕಾರಿಗಳ ಸ್ಪಂದನೆ ಹೇಗಿದೆ?

೧೨] ಸರ್ಕಾರದಿಂದ ಬಂದ ಎಲ್ಲ ಸೌಲಭ್ಯಗಳ/ ಅನುದಾನಗಳ ಸದ್ಬಳಕೆ ಆಗಿದೆಯೇ?

೧೩] ಒಟ್ಟಾರೆ ಎಸ್.ಡಿ.ಎಮ್.ಸಿ. ಯ ಕುರಿತು ತಮ್ಮ ಅಭಿಪ್ರಾಯವೇನು?

೧೪] ಎಸ್.ಡಿ.ಎಮ್.ಸಿ. ಕಾರ್ಯ ತಮಗೆ ತೃಪ್ತಿದಾಯಕವೆನಿಸಿದೆಯೇ?

ಕ

## ಪ್ರಶ್ನಾವಳಿಗಳು–ವಿದ್ಯಾರ್ಥಿಗಳಿಗೆ

೧] ನಿಮ್ಮ ಶಾಲೆಯಲ್ಲಿ ಎಸ್.ಡಿ.ಎಮ್.ಸಿ. ಇದೆಯೇ?

೨] ಎಸ್.ಡಿ.ಎಮ್.ಸಿ. ಯ ಅಧ್ಯಕ್ಷರು ಮತ್ತು ಸದಸ್ಯರು ಯಾರು ಯಾರು?

೩] ನಿಮ್ಮ ಶಾಲಾ ಚಟುವಟಿಕೆಗಳಲ್ಲಿ ಎಸ್.ಡಿ.ಎಮ್.ಸಿ. ಯವರು ಭಾಗವಹಿಸುತ್ತಾರೆಯೇ?

೪] ಎಸ್.ಡಿ.ಎಮ್.ಸಿ. ಯವರು ಸರಿಯಾಗಿ ಕಾರ್ಯ ನಿರ್ವಹಿಸುತ್ತಿರುವರೇ?

೫] ನಿಮ್ಮ ಕಲಿಕೆಗೆ ಎಸ್.ಡಿ.ಎಮ್.ಸಿ. ಯವರು ಹೇಗೆ ಸಹಾಯ ಮಾಡುತ್ತಾರೆ?

೬] ರಾಷ್ಟ್ರೀಯ ಹಬ್ಬಗಳಲ್ಲಿ ಎಸ್.ಡಿ.ಎಮ್.ಸಿ. ಸದಸ್ಯರೆಲ್ಲರೂ ಭಾಗವಹಿಸುತ್ತಾರೆಯೇ?

೭] ಎಸ್.ಡಿ.ಎಮ್.ಸಿ. ಯವರು ನಿಮ್ಮ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಿಗೆ ಹೇಗೆ ಪ್ರೋತ್ಸಾಹ ನೀಡುತ್ತಾರೆ?

೮] ನಿಮ್ಮಲ್ಲಿ ಎಸ್.ಡಿ.ಎಮ್.ಸಿ. ಕಾರ್ಯ ನಿರ್ವಹಿಸುವುದರ ಬಗ್ಗೆ ನಿಮಗೆ ತೃಪ್ತಿ ಇದೆಯೇ?

## ಡ

## ಪ್ರಶ್ನಾವಳಿಗಳು–ಪಾಲಕರಿಗೆ

೧] ನೀವು ನಿಮ್ಮ ಮಕ್ಕಳ ಕಲಿಕೆ ಗಮನಿಸಲು ಮೇಲಿಂದ ಮೇಲೆ ಶಾಲೆಗೆ ಭೇಟಿ ಕೊಡುತ್ತೀರಾ?

೨] ನಿಮ್ಮ ಮಗುವಿನ ಕಲಿಕೆಯಲ್ಲಿ ಎಸ್.ಡಿ.ಎಮ್.ಸಿ. ಸರಿಯಾಗಿ ಕಾರ್ಯನಿರ್ವಹಿಸುತ್ತಿದೆಯೇ?

೩] ಎಸ್.ಡಿ.ಎಮ್.ಸಿ. ಮತ್ತು ಶಾಲಾ ಸಿಬ್ಬಂದಿ ನಡುವೆ ಹೊಂದಾಣಿಕೆ ಇದೆಯೇ?

೪] ಶಾಲಾ ಅಭಿವೃದ್ದಿಗೆ ಎಸ್.ಡಿ.ಎಮ್.ಸಿ. ಮೂಲಕ ಪಾಲಕರಾಗಿ ತಾವು ಹೇಗೆ ಸಹಾಯ ಮಾಡುವಿರಿ?

೫] ಶಾಲಾ ಕಾರ್ಯಕ್ರಮಗಳಲ್ಲಿ ಎಸ್.ಡಿ.ಎಮ್.ಸಿ. ಜೊತೆಗೆ ತಾವು ಭಾಗವಹಿಸುತ್ತೀರಾ?

೬] ನಿಮ್ಮ ಮಕ್ಕಳ ಕಲಿಕೆ ಹೆಚ್ಚಿಸಲು ನಿಮ್ಮ ಸಲಹೆಗಳೇನು?

೭] ಸದ್ಯ ಕಾರ್ಯ ನಿರ್ವಹಿಸುತ್ತೀರುವ ಎಸ್.ಡಿ.ಎಮ್.ಸಿ. ಯಲ್ಲಿ ಬದಲಾವಣೆ ಬಯಸಿದ್ದೀರಾ?

೮] ನೀವು ಆಯ್ಕೆ ಮಾಡಿದ ಎಸ್.ಡಿ.ಎಮ್.ಸಿ. ಯಿಂದ ಶಾಲಾ ಅಭಿವೃದ್ದಿಯಲ್ಲಿ ಬದಲಾವಣೆ ಎನಿಸಿದೆಯೇ?

೯] ನಿಮ್ಮ ಶಾಲೆಯ ಎಸ್.ಡಿ.ಎಮ್.ಸಿ.ಯು ಬೇರೆ ಶಾಲೆಗಳ ಎಸ್.ಡಿ.ಎಮ್.ಸಿ. ಗಳಿಗಿಂತ ಹೇಗೆ ಭಿನ್ನವೆನಿಸಿದೆ?

೧೦] ಎಸ್.ಡಿ.ಎಮ್.ಸಿ. ಕಾರ್ಯನಿರ್ವಹಣೆಯಲ್ಲಿ ತಮಗೂ ಸಲಹೆಗಳನ್ನು ನೀಡಲು ಅವಕಾಶ ಇದೆಯಾ?

೧೧] ಎಸ್.ಡಿ.ಎಮ್.ಸಿ. ಸದಸ್ಯರು ನಿಮ್ಮ ಸಲಹೆಗಳಿಗೆ ಮನ್ನಣೆ ನೀಡಿರುವರೆ?

೧೨] ನಿಮ್ಮ ಶಾಲೆಯ ಎಸ್.ಡಿ.ಎಮ್.ಸಿ. ಯಿಂದ ನಿಮ್ಮ ಮಕ್ಕಳ ಕಲಿಕ ಗುಣಮಟ್ಟ ಹೆಚ್ಚಿದೆಯೇ?

೧೩] ಒಟ್ಟಾರೆಯಾಗಿ ನಿಮ್ಮ ಮಕ್ಕಳ ಕಲಿಕೆ ಹಾಗೂ ಶಾಲಾ ಅಭಿವೃದ್ದಿಯಲ್ಲಿ ಎಸ್.ಡಿ.ಎಮ್.ಸಿ. ಯ ಪಾತ್ರದ ಬಗ್ಗೆ ನಿಮ್ಮ ಅಭಿಪ್ರಾಯವೇನು?

# *ಗ್ರಂಥ ಋಣ*


**೧. ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿ–ಗತಿ**
ಸಂಪುಟ ಮಲೆ ೧೫೭
ಡಾ. ಟಿ.ಆರ್.ಚಂದ್ರಶೇಖರ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

**೨. ಸಮಕ್ಷಮ**
ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು.

**೩. ಸ್ಪಂದನ**
ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು.

**೪. ಶೈಕ್ಷಣಿಕ ನಿರ್ವಹಣೆ ಮತ್ತು ಶಾಲಾ ಸಂಘಟನೆ**
ಡಿ.ಎಡ್.ದ್ವಿತೀಯ ವರ್ಷದ ಪಠ್ಯ ಪುಸ್ತಕ
ಶ್ರೀಮತಿ. ಡಿ.ರಾಧಾಮನಿ
ಶ್ರೀ ಸುಬ್ರಮಣ್ಯಂ
ಶ್ರೀಮತಿ.ಎಸ್. ಪಾರ್ವತಿ
ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು.

